# ಬಿಡುಗಡೆಯ ಹಾಡುಗಳು

(ಸ್ವಾತಂತ್ರ್ಯ ಹೋರಾಟ ಕಾಲದ ಗೇಯ ಪದ್ಯಗಳು)

ಸಂಪಾದಕ

**ಡಾ. ಸೂರ್ಯನಾಥ ಕಾಮತ**



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಚಿತ್ರಗಳು : ಪಾರ್ಥ ಸೇನಗುಪ್ತ, ದೀಪಕ್ ಮೈತ್ರ

ISBN 81-237-2226-5

ಮೊದಲ ಮುದ್ರಣ : 1997 (ಶಕ 1919)

**ರೂ. 9.00**
Songs of the Freedom Movement (*Kannada*)
ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್‌ಪಾರ್ಕ್, ಹೊಸದೆಹಲಿ-110016
ಇವರಿಂದ ಪ್ರಕಟಿತ.

# ಮುನ್ನುಡಿ

ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಹಾಡುತ್ತಿದ್ದ ಹಾಡು, ಕವನ, ಗೀತೆ, ಲಾವಣಿ, ಗೀಗೀಪದ, ರಿವಾಯತ್ ಮುಂತಾದ ಗೇಯ ಪ್ರಕಾರಗಳ ಸಂಗ್ರಹ ಈ ಕಿರುಹೊತ್ತಿಗೆ. ಅಂದಿನ ಹೋರಾಟಗಾರರ ವಿಚಾರಗಳೇನು, ಕರ್ನಾಟಕದಲ್ಲಿ ಅವರನ್ನು ಪ್ರಚೋದಿಸಿದ ಸಂಗತಿಗಳೇನು, ಆ ಹೋರಾಟಗಾರರ ಆಶಯಗಳೇನು, ಎಂದು ತಿಳಿಯಲು ಈ ಸಂಗ್ರಹ ಸಹಾಯಕವಾಗಿದೆ. ಇದನ್ನು ಹಾಡಿದವರು, ಕೇಳಿದವರು ಸಂಗ್ರಹಿಸಿಕೊಟ್ಟ ಹಾಡುಗಳು ಇದರಲ್ಲಿವೆ. ಬೇರೆ ಬೇರೆ ಸಂದರ್ಭದಲ್ಲಿ ಮುದ್ರಿಸಿದ ಕಿರು, ಹಿರಿ ಪುಸ್ತಕಗಳಿವೆ. ಇವನ್ನು ರಚಿಸಿದವರಲ್ಲಿ ಗಣ್ಯ ಕವಿಗಳಿದ್ದಾರೆ; ಸಾದಾ ಜಾನಪದ ಪ್ರತಿಭಾಶಾಲಿಗಳಿದ್ದಾರೆ. ಬೇಂದ್ರೆ, ಕುವೆಂಪು ಮುಂತಾದ ಗಣ್ಯ ಕವಿಗಳು ಆಗ ಕಟ್ಟಿದ, ಹೋರಾಟಗಾರರಲ್ಲಿ ಪ್ರಿಯವೆನಿಸಿದ ಹಾಡುಗಳೂ ಉಂಟು. ಅಂಥ ಗಣ್ಯಕವಿಗಳ ಕವನ ಸಂಕಲನಗಳು ಪ್ರತ್ಯೇಕವಾಗಿ ದೊರೆಯುತ್ತಿದ್ದು ಅವನ್ನು ಇಲ್ಲಿ ಮುದ್ರಿಸಿಲ್ಲ. ಆದರೆ ಬೇಂದ್ರೆಯವರ 'ಇದೊ ಹೊರಟೆವು ಬಿಡುಗಡೆಗಾಗಿ', ಕುವೆಂಪು ಅವರ 'ನಡೆ ಮುಂದೆ ನಡೆ ಮುಂದೆ' ಮುಂತಾದ ಕವಿತೆಗಳನ್ನು ಇಲ್ಲಿ ಉಲ್ಲೇಖಿಸಬಹುದು.

ಈಗಿನ ಕಾಸರಗೋಡು ಜಿಲ್ಲೆಗೆ ಸೇರಿದ್ದ ದಿ॥ ಪುಂಡೂರು ಲಕ್ಷ್ಮೀನಾರಾಯಣ ಪುಣಿಂಚತ್ತಾಯರು ಅನೇಕ ದೇಶಭಕ್ತಿಗೀತೆಗಳನ್ನು ಆ ಕಾಲದಲ್ಲಿ ಬರೆದು ಗಣ್ಯ ಪತ್ರಿಕೆಗಳಲ್ಲಿ ಪ್ರಕಟಿಸುತ್ತಿದ್ದರು. ಅಲ್ಲದೆ ಅವರ ಸ್ವತಂತ್ರ ಸಂಗ್ರಹಗಳೆರಡು ಪ್ರಕಟವಾಗಿವೆ. 'ಸೇವಾದಲ ಗೀತೆಗಳು' ಬುರ್ಲಿ ಬಿಂದುಮಾಧವರಿಂದ ಪ್ರಕಟಿತ. 'ನಾಡ ಹಾಡುಗಳು' ಅವರೇ ಮಿಂಚಿನ ಬಳ್ಳಿಯಿಂದ ಪ್ರಕಟಿಸಿದ್ದ ಸಂಗ್ರಹ. ಖ್ಯಾತ ಲಾವಣಿಕಾರರಾದ ದಿ॥ ಎನ್. ವಿಷಕಂಠರಾವ್ (ಮೈಸೂರು) ಹಾಗೂ ದಿ॥ ಬಿ. ನೀಲಕಂಠರಾವ್ (ಬೆಂಗಳೂರು) ತಮ್ಮದೇ ಒಂದು ಅಥವಾ ಹೆಚ್ಚು ಲಾವಣಿಗಳ ಸಂಗ್ರಹ ಪ್ರಕಟಿಸಿದ್ದರು. ಬೆಳಗಾವಿ ಜಿಲ್ಲೆಯ ದಿ॥ ಹುಲಕುಂದ ಭೀಮಕವಿ ಖ್ಯಾತ ಹಾಡುಗಾರರು – ಗೇಯ ಗೀತಕಾರರು. ಅವರ 'ರಾಷ್ಟ್ರೀಯ ಗೀಗೀ ಪದಗಳು' ಪ್ರಕಟವಾಗಿದೆ. ಖ್ಯಾತ ಲಾವಣಿ 'ದೇಶೀಯ ದುಮದುಮ್ಮೆ' ಬರೆದ 'ಸೀತಾತನಯ' ಅಥವಾ ದಿ॥ ಶ್ರೀಧರ ಖಾನೋಲ್ಕರ್ ಅವರ ಇದೇ ಹೆಸರಿನ ಪುಸ್ತಕವನ್ನು 1921ರಲ್ಲಿ ಪ್ರಕಟಿಸಿದ್ದಕ್ಕೆ ಅದರ ಪ್ರಕಾಶಕ ದಿ॥ ರಂ. ರಾ. ದಿವಾಕರರಿಗೆ ಎರಡು ವರ್ಷ ಶಿಕ್ಷೆಯಾಗಿತ್ತು. ಪುಸ್ತಕದಲ್ಲಿ ಖಾನೋಲ್ಕರ್‌ರ ಹೆಸರು 'ಸೀತಾತನಯ' ಎಂದಿದ್ದು ದಿವಾಕರ ತಾಯಿಯ ಹೆಸರೂ ಇದೇ ಎಂದು ಅವರನ್ನೇ ಶಿಕ್ಷೆಗೆ ಒಳಪಡಿಸಲಾಯಿತು. ಬೇಂದ್ರೆಯವರ ನಿಕಟಮಿತ್ರ ಶ್ರೀಧರ ಖಾನೋಲ್ಕರ್ ಜೈಲು ಇಲಾಖೆಯಲ್ಲಿ ನೌಕರಿಯಲ್ಲಿ ಇದ್ದು ದೇಶಭಕ್ತಿಯ ತಮ್ಮ ಭಾವನೆಗಳನ್ನು ಬಂಧಿಸಿಡದವರಾಗಿದ್ದರು. ಸಂಗ್ರಾಮ ಕಾಲದಲ್ಲಿ ಜನಪ್ರಿಯವಾಗಿ ಹಾಡಲಾಗುತ್ತಿದ್ದ ದೀರ್ಘ ಲಾವಣಿ ಇದು.

ಇಲ್ಲಿನ ಮೊದಲ ಕವಿತೆ ಬಾಳಾಚಾರ್ಯ ಸಕ್ಕರಿ ಎಂಬ ದೇಶಭಕ್ತ ಕೀರ್ತನಕಾರರದು. 'ಶಾಂತಕವಿ'ಎಂಬ ಕಾವ್ಯನಾಮದ ನವೋದಯ ಕಾಲದ ಕವಿಗಳು ಅವರು. ಖ್ಯಾತ ಕವಿ, ನಾಟಕಕಾರ, ಸಾಹಿತಿ ದಿ॥ ಮುದವೀಡು ಕೃಷ್ಣರಾಯರು ಬರೆದ ಹಲವು ಹಾಡುಗಳಲ್ಲಿ 'ಮರೆತೆ ಯಾತಕಯ್ಯಾ ನಿನ್ನ ಮಾತೃಭೂಮಿಯ' ಆಗಿನ ಜನಪ್ರಿಯ ಹಾಡು. ಇವರು ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

'ಕವಿಭೂಷಣ' ಎಂದು ಜನಪ್ರಿಯರಾಗಿದ್ದ 'ಆನಂದಕಂದ ಕಾವ್ಯನಾಮದ ಬೆಟಗೇರಿ ಕೃಷ್ಣಶರ್ಮ ಗಣ್ಯ ಸಾಹಿತಿ, ಕಾದಂಬರಿಕಾರ. ಸ್ವಾತಂತ್ರ್ಯ ಚಳವಳಿಯ ಕಾಲದಲ್ಲಿ ರಾಷ್ಟ್ರೀಯ ಶಾಲೆಯಲ್ಲಿ ಅಧ್ಯಾಪಕರೂ ಆಗಿದ್ದು 'ಜಯಂತಿ' (ಧಾರವಾಡ) ಮಾಸಿಕ ನಡೆಸಿದವರು ಅವರು. ಅವರ ಹಾಡು ಸಹ ಇಲ್ಲಿದೆ.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕರನಿರಾಕರಣೆ ನಡೆಸಿದ್ದ ಉತ್ತರ ಕನ್ನಡದ ಅಂಕೋಲೆ, ಕುಮಟಾ ಭಾಗಕ್ಕೆ ಸೇರಿದ ಸಾಹಿತಿ, ಕವಿ ಸ. ಪ. ಗಾಂವಕರರ ('ನನ್ನ ನಾಡ ಚೆನ್ನ ನಾಡ') ಒಂದು ಹಾಡು ಇಲ್ಲಿದೆ. ಅದರಲ್ಲಿ ಭಾಷಾಂತರವಾದವೂ ಉಂಟು. ಖ್ಯಾತ ಪತ್ರಕರ್ತ ದಿ॥ ತಿ. ತಾ. ಶರ್ಮರ ಪತ್ನಿ ದಿ॥ಶ್ರೀಮತಿ ತಿರುಮಲೆ ರಾಜಮ್ಮ ಬರೆದ ಹಾಡು 'ಸ್ವರಾಜ್ಯ ಮಂಗಳ' ಮಹಿಳೆಯರ ಬರಹದ ಏಕಮಾತ್ರ ಪ್ರತಿನಿಧಿಯಾಗಿ ಇಲ್ಲಿ ಬಂದಿದೆ. ಖ್ಯಾತ ಕೀರ್ತನಕಾರ ಸೇವಾದಲದ ಕಾರ್ಯಕರ್ತ ದಿ॥ ರಾ. ವೆ. ಕರಗುದರಿ (ಹುಬ್ಬಳ್ಳಿ) ಅವರ ಹಲವು ಹಾಡುಗಳಲ್ಲಿ ಒಂದನ್ನು ಇಲ್ಲಿ ಪ್ರಕಟಿಸಲಾಗಿದೆ.

ಸಿದ್ದಾಪುರವೂ ಅಂಕೋಲಾದಂತೆ ಕರನಿರಾಕರಣೆ ನಡೆಸಿ ಪ್ರಖ್ಯಾತವಾಗಿದ್ದು ಅಲ್ಲಿನ ಖ್ಯಾತ ಕವಿ ತಿಪ್ಪಯ್ಯ ಮಾಸ್ತರ್ (ಬೆಟಗೇರಿ) ಕೊನೆಗಾಲದಲ್ಲಿ ಅಂಧರಾದರೂ ಹಲವು ಸ್ಫೂರ್ತಿದಾಯಕ ಕವಿತೆ ಬರೆದವರು. ಅವರ 'ರಾಷ್ಟ್ರೀಯ ಪದ್ಯಗಳು' ಕಿರುಪುಸ್ತಕದಿಂದ ಎರಡನ್ನು ಇಲ್ಲಿ ಆಯ್ದಿದೆ. 'ಸುಮ್ಮನೆ ದೊರಕುವುದೆ ಸ್ವರಾಜ್ಯ' ಅವರ ಜನಪ್ರಿಯ ಕವಿತೆ. ಅವರ ಮೊಮ್ಮಗ ಶ್ರೀ ಮಾರುತಿ ಬೆಟಗೇರಿ ಆ ಕಿರುಪುಸ್ತಕವನ್ನು ನನಗೆ ಒದಗಿಸಿದ್ದರು.

ದಿ॥ ಸಿಂಪಿ ಲಿಂಗಣ್ಣ ಖ್ಯಾತ ಕವಿಗಳು, ಸಾಹಿತಿಗಳು ಹಾಗೂ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದವರು. ಅವರೇ ಒದಗಿಸಿದ್ದ ಅವರ ಒಂದು ಕವಿತೆ ಇಲ್ಲಿದೆ. ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಜಿ. ನಾರಾಯಣ ಅವರ ಸ್ವಾತಂತ್ರ್ಯ ಪೂರ್ವದಲ್ಲಿ ರಚಿಸಿ ಹಾಡುತ್ತಿದ್ದ ಹಲವು ಹಾಡುಗಳಲ್ಲಿ ಒಂದು ಇಲ್ಲಿ ಪ್ರಕಟಿತವಾಗಿದೆ. ಇವರದೇ 'ರಾಷ್ಟ್ರೀಯ ಪದಗಳು' ಕಿರುಸಂಗ್ರಹವಿದೆ. ದಿ॥ ಬಿಷ್ಟಪ್ಪ ಮಂಡೇದ ಬೆಳಗಾವಿ ಜಿಲ್ಲೆಯಲ್ಲಿ ಗೀಗೀ ಮೇಳ ಹೊಂದಿದ್ದ ಸ್ವಾತಂತ್ರ್ಯ ಯೋಧರು. 1942ರಲ್ಲಿ ಜೈಲು ಕಂಡವರು. ಅವರೇ ನನಗೆ ತಂದೊಪ್ಪಿಸಿದ್ದ ಒಂದು ಹಾಡನ್ನು ಇಲ್ಲಿ ಸೇರಿಸಲಾಗಿದೆ.

ಇನ್ನೆಷ್ಟೋ ಕವಿತೆಗಳನ್ನು ಬರೆದವರು ಯಾರೆಂದು ಖಚಿತವಾಗಿ ತಿಳಿದಿಲ್ಲ. ಅದನ್ನು ಸಂಗ್ರಹಿಸಿ ಕೊಟ್ಟವರ ಹೆಸರುಗಳನ್ನು ಇಲ್ಲಿ ಹೇಳಲಾಗಿದೆ. ಹಾಡುಗಳ ಬಗ್ಗೆ ವಿಶೇಷ ಮಾಹಿತಿ ಪ್ರತೀ ಹಾಡಿನ ಜೊತೆ ಕೊಡಲಾಗಿದೆ.

ದೇಶದ ಘನತೆ, ಇತಿಹಾಸ, ದೇಶದ ದೀನಸ್ಥಿತಿ, ಪರಕೀಯರ ಆಡಳಿತದಿಂದ ಆದ ಹಾವಳಿ, ದೇಶಭಕ್ತನಿಗಿರಬೇಕಾದ ತ್ಯಾಗ, ಅಹಿಂಸೆ, ಕಷ್ಟಸಹಿಷ್ಣುತೆಗಳ ಮಹತ್ವ, ಖಾದಿಯ ಮಹತ್ವ, ಸ್ವದೇಶೀ ವ್ರತದ ಅವಶ್ಯಕತೆ, ಮದ್ಯಪಾನದ ವಿರುದ್ಧ ನಡೆದ ಸಮರ, ಅಸ್ಪೃಶ್ಯತಾ ನಿವಾರಣೆ,

ಸಾಮಾಜಿಕ ಐಕ್ಯ ಮುಂತಾದ ಆ ಕಾಲದಲ್ಲಿ ಎತ್ತಿ ಹಿಡಿದ ಮೌಲ್ಯಗಳು, ಗಾಂಧೀಜಿಯವರ ನಾಯಕತ್ವದ ಮಹತ್ವ, ಅಂದಿನ ಹೋರಾಟಗಾರರ ವಿವಿಧ ಪ್ರೇರಕ ಭಾವನೆಗಳು, ಆಶಯಗಳು ಇಲ್ಲಿ ಪ್ರಕಟವಾಗಿವೆ. ಒಳ್ಳೆಯ ಕಾವ್ಯಗುಣದ ಕವಿತೆಗಳೂ ಇಲ್ಲಿ ಉಂಟು. ಪ್ರಭಾವಿಯಾಗಿ ಹಾಡಲು ಬರುವಂತೆ ರಚಿಸಿದ ಲಾವಣಿಗಳು, ಗೀಗೀ ಪದಗಳಲ್ಲಿ ಪ್ರಾಸದ ಒತ್ತಾಸೆ ಇದೆ. ಆದರೆ ಅಂದಿನ ಜನರು ಇವನ್ನು ಕೇಳಿ ಸ್ಫೂರ್ತಿಗೊಂಡಿದ್ದರು. ಮೆರವಣಿಗೆಗಳಲ್ಲಿ ಸಾಮೂಹಿಕವಾಗಿ ಕೂಡ ಇಲ್ಲಿನ ಕವಿತೆಗಳನ್ನು ಹಾಡುತ್ತಿದ್ದರು.

'ದೇಶೀಯ ದುಮದುಮ್ಮೆ' ಶ್ರೇಷ್ಠ ದೀರ್ಘ ಕವಿತೆ. ದೇಶದ ಅಂದಿನ ಸ್ಥಿತಿ, ಪ್ರೇರಕವಾದ ಗತ ಇತಿಹಾಸ, ಆರ್ಥಿಕ ಚಿತ್ರ, ದೇಶಭಕ್ತರ ಭಾವನೆಗಳು ಇಲ್ಲಿ ಸಮರ್ಥವಾಗಿ ಮೂಡಿ ಬಂದಿವೆ. ಇತರ ಕೆಲವು ಕವಿತೆಗಳಲ್ಲೂ ಕಾವ್ಯಗುಣ ಮಿಂಚುತ್ತದೆ. ಇದು ಹಾಡುತ್ತಿದ್ದ ಗೇಯ ಕೃತಿಗಳ ಸಂಗ್ರಹ. ಕಾವ್ಯ ಜನರನ್ನು, ಶ್ರೀಸಾಮಾನ್ಯನನ್ನು ಹೇಗೆ ಬಡಿದೆಬ್ಬಿಸಿತೆಂದು ಸೂಚಿಸುವ ಉದ್ದೇಶ ಈ ಸಂಗ್ರಹದಲ್ಲಿದೆ. ಇದು ಪ್ರಾತಿನಿಧಿಕ ಸ್ವರೂಪದ್ದು. ಹೈದರಾಬಾದ್ ಕರ್ನಾಟಕದ ಹಾಡುಗಳು (ದಿ॥ ನಲವಡಿ ಶ್ರೀಕಂಠಶಾಸ್ತ್ರಿಗಳ ಒಂದು ಹಾಡಿನ ವಿನಾ) ನನಗೆ ಸಿಗಲಿಲ್ಲ. ಈ ಅಲ್ಪಾವಧಿಯಲ್ಲಿ ಅದನ್ನು ಸಂಗ್ರಹಿಸಲು ಸಾಧ್ಯವಾಗಲಿಲ್ಲ. (ಶ್ರೀಕಂಠಶಾಸ್ತ್ರಿಗಳು ವಾಸ್ತವವಾಗಿ ಧಾರವಾಡ ಜಿಲ್ಲೆಯವರು).

ಸ್ವಾತಂತ್ರ್ಯದ 40ನೆಯ ಜಯಂತಿಯ ಸಂದರ್ಭದಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದ ಪ್ರೊ॥ ಜಿ. ಎಸ್. ಶಿವರುದ್ರಪ್ಪನವರ ಸೂಚನೆಯಂತೆ ನಾನು 400 ಹಾಡುಗಳನ್ನು ಸಂಗ್ರಹಿಸಿದ್ದು 114 ಹಾಡುಗಳನ್ನು ಪ್ರಕಟಿಸಿದ್ದೆ('ಸ್ವಾತಂತ್ರ್ಯ ಸಂಗ್ರಾಮದ ಗೇಯ ಗೀತೆಗಳು', 1988). ಅದರಿಂದ ಆಯ್ದ ಹಾಡುಗಳನ್ನು ಇಲ್ಲಿ ಪ್ರಕಟಿಸಿದೆ. ಆ ಪುಸ್ತಕ ಒಂದೇ ವರ್ಷದಲ್ಲಿ ಖರ್ಚಾಗಿ ಹೋಯಿತು. ಈ ಎಲ್ಲ ಹಾಡುಗಳ ಸಂಗ್ರಹಕ್ಕೆ ನೆರವಾದವರಿಗೆ (ಅವರ ಹೆಸರನ್ನು ಹಾಡಿನ ಜೊತೆಗೇ ಕೊಡಲಾಗಿದೆ) ಕೃತಜ್ಞತಾಪೂರ್ವಕ ನಮನ.

ನಾನು ಬಳಸಿಕೊಂಡ ಮುದ್ರಿತ ಆಕರಗಳನ್ನು ಪ್ರತ್ಯೇಕವಾಗಿ ಕೊಡಲಾಗಿದೆ. ನಾನು 1972ರಿಂದ 1980ರ ನಡುವೆ ಸಂಪಾದಿಸಿದ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' ಕೃತಿಯ ಮೂರೂ ಸಂಪುಟಗಳಲ್ಲಿ ಕೆಲವು ಹಾಡುಗಳು ಪೂರ್ಣವಾಗಿ ಇಲ್ಲವೆ ಭಾಗಶಃ ಬಂದಿದ್ದವು. ಮತ್ತೆ ಕೆಲವು ಆಗಲೇ ನನ್ನಲ್ಲಿ ಸಂಗ್ರಹವಾಗಿದ್ದವು. 1987ರಲ್ಲಿ ಮತ್ತೆ ಯತ್ನಿಸಿ ಇನ್ನೂ ಹೆಚ್ಚು ಹಾಡುಗಳನ್ನು ಸಂಗ್ರಹಿಸುವುದು ಸಾಧ್ಯವಾಗಿತ್ತು. ನ್ಯಾಷನಲ್ ಬುಕ್ ಟ್ರಸ್ಟ್ ಹಾಕಿದ ಇತಿಮಿತಿ, ಕಾಲಮಿತಿಯಲ್ಲಿ ಇದು ಪ್ರಕಟವಾಗಿದೆ. ಇದರ ಪ್ರಕಟಣೆಗೆ ಕಾರಣಕರ್ತರಾದವರಿಗೆಲ್ಲ ನಮನ.

15 ಆಗಸ್ಟ್, 1997 **ಸೂರ್ಯನಾಥ ಕಾಮತ**
ಬೆಂಗಳೂರು

# ಪರಿವಿಡಿ

# ೧. ನಮ್ಮದೀ ನಮ್ಮದೀ ಭರತಭೂಮಿ

(ರಾಗ : ಕಾಂಬೋಧಿ, ತಾಳ : ಝುಂಪೆ)

ನಮ್ಮದೀ ನಮ್ಮದೀ ಭರತಭೂಮಿ ॥ಪಲ್ಲವಿ॥
ಹೆರವರಂ ನಂಬದಲೆ ಜಗದೀಶ್ವರಂ ತಾನೇ।
ಧರಿಸಿ ನಾನಾವತಾರಂಗಳನ್ನು ॥
ಕರೆವ ಸರ್ವಸ್ವಮಂ ಧರೆಯ ಸಂರಕ್ಷಿಸುವ ।
ತೆರವ ಕಲಿಸಿದಪೂರ್ವ ಪಾಠಶಾಲೆ ॥

ಉಚ್ಚ ತತ್ವಾರ್ಥಗಳನಾಚರಿಸಿ ಲೋಕವ ।
ನ್ನೆಚ್ಚರಿಸಿ ದೇವರಿಚ್ಛಾ ಜ್ಯೋತಿಯಂ ॥
ಅಚ್ಚಳಿಯದೊಲು ಗೈದ ಋಷಿಪದವೀಧರರು ।
ಸ್ವೇಚ್ಛೆಯಿಂ ನೆಲೆಗೈದ ಸುಕ್ಷೇತ್ರವು ॥

ಪದವೀಧರರ್ ಪೇಳ್ದ ಪದ್ಧತಿಗಳಂ ಬಿಡದೆ ।
ಸದಭಿಮಾನೈಕ್ಯ ಶೌರ್ಯೋತ್ಸಾಹದಿಂ॥
ಉದಿತ ಸುಸ್ಫೂರ್ತಿಯಿಂದೆಮ್ಮ ಪೂರ್ವಜರಿದ್ದ ।
ಮುದದ ಭಾಗ್ಯದ ನಿಧಿಯ ಮಂದಿರವಿದು ॥

ದೇವಋಷಿ ಪೂರ್ವಜರುದಾತ್ತವೃತ್ತಿ ಪ್ರಭಾ ।
ಭಾವನಾಮೃತ ದೃಷ್ಟಿಯಿಂ ಬೆಳೆಯುವ॥
ಭಾವಿಸುಖ ಸಾಮ್ರಾಜ್ಯಮೆಂಬ ಸತ್‌ಫಲಗಳ ।
ನ್ನೀವ ಸರ್ವೋತ್ಕೃಷ್ಟ ನಂದನವನಂ ॥

ಲೇಖಕರು : ಶಾಂತಕವಿ (ಬಾಳಾಚಾರ್ಯ ಸಕ್ಕರಿ)
('ಜೈ ಭಾರತ ರಾಷ್ಟ್ರಗೀತೆಗಳು' ಸಂಗ್ರಹದಿಂದ)

## ೨. ಮರೆತೆ ಏತಕಯ್ಯಾ

ಮರೆತೆ ಏತಕಯ್ಯಾ ನಿನ್ನ ಮಾತೃಭೂಮಿಯ ॥ಪಲ್ಲವಿ॥

ನಿರುತ ನಿನ್ನ ಹೊರೆಯ ಹೊತ್ತು ಪೊರೆವ ತಾಯಿಯ
ಮರೆತೆ ಏತಕಯ್ಯಾ ॥ಅನುಪಲ್ಲವಿ॥

ಒಂಭತ್ತು ತಿಂಗಳು ತನ್ನೊಳಿಂಬುಗೊಟ್ಟವಳು ತಾಯಿ।
ತೊಂಬತ್ತು ವರುಷವಾದರು ಪೊರೆವ ಕುಂಭಿನಿ ತಾಯಲ್ಲೋ॥
ಮಾತೃಭೂಮಿಯಾ ॥೧॥

ನಡೆನುಡಿ ಬರುವ ತನಕ ಒಡಲಿಗನ್ನ ಕೊಡುವಳು ತಾಯಿ।
ಕಡೆತನಕ ನಿನ್ನೊಡಲಿಗೆ ಅನ್ನ ಕೊಡುವಳು ತಾಯಲ್ಲೊ॥
ಮಾತೃಭೂಮಿಯ ॥೨॥

ಗೇಣು ಭೂಮಿಗಾಗಿ ಎನ್ನ ಪ್ರಾಣ ಹೋಗಲಿ ಎಂದೆನ್ನುವಿ।
ಕಾಣದೇನೂ ನಾಡೇ ಪರರಾಧೀನವಾಗಿರುವುದು ಮನುಜಾ॥
ಮಾತೃಭೂಮಿಯ ॥೩॥

**ಲೇಖಕರು : ಮುದವೀಡು ಕೃಷ್ಣರಾಯರು (1920)**
('ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಸಮರ' ಸಂಗ್ರಹದಿಂದ)

## ೩. ಮಾತೃಭೂಮಿ ಜನನಿ

ಮಾತೃಭೂಮಿ ಜನನಿ ನಿನ್ನ ಚರಣ ಸೇವೆ ಮಾಡುವಾ।
ಪರಮ ಹರುಷದಿಂದ ನಿನ್ನ ಸುಖಕೆ ಪ್ರಾಣವೀಯುವಾ ॥ಪಲ್ಲವಿ॥

ತನುಮನಧನದಿಂದ ನಿನ್ನ ಘನತೆಯನ್ನು ಬೆಳೆಸುವಾ।
ದಣಿಯದೆ ಅನುದಿನವು ದುಡಿದು ಗುಣಗಳನಿಸಿಕೊಳ್ಳುವಾ ॥೧॥

ಬಂದುಸಿಂದ ತೋಂದರೆಗಳ ಸಂದಣಿಯನು ಸರಿಸುವಾ।
ಮುಂದೆ ಅಡಿಯನಿಡುತ ಒಂದುಗೂಡಿ ಜಯವ ಪೊಂದುವಾ ॥೨॥

ಹಿಂದುಮಾತೆ ಬಂಧುಭಾವದಿಂದ ಸಿನ್ನ ಕಂದರು।
ಒಂದುಗೂಡಿ ಪಾರತಂತ್ರ್ಯ ಬಂಧವ ಹರಿದೊಗೆವೆವು ॥೩॥

ಕೆಟ್ಟ ಕಣ್ಣಿನಿಂದ ನೋಳ್ಪ ದುಷ್ಟಜನರಿಗಂಜದೆ।
ದಿಟ್ಟತನದೊಳೆಲ್ಲರೊಟ್ಟುಗೂಡುತಿಹೆವು ಕಷ್ಟಕೆ ॥೪॥

**ಲೇಖಕರು : ಕವಿಭೂಷಣ ಬೆಟಗೇರಿ ಕೃಷ್ಣಶರ್ಮ**
(‘ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಸಮರ’ ಸಂಗ್ರಹದಿಂದ)



## ೪. ನನ್ನ ನಾಡು ಚೆನ್ನ ನಾಡು

ನನ್ನ ನಾಡ ಚೆನ್ನ ನಾಡ ಬಣ್ಣಬಡುತ ಪೊರೆಯುವಾ।
ನಣ್ಣಿಯಿಂದ ತಾಯಿನಾಡ ಹೊನ್ನ ಸಿರಿಯ ಬೆಳಗುವ॥

ನಾಡ ಬವರ ಬವಣೆಯಲ್ಲಿ ಜೀವವನ್ನು ನೀಡುವ।
ಹೇಡಿತನವ ಹೊಡೆದುಹಾಕಿ ರೂಢಿಯಲ್ಲಿ ಮೆರೆಯುವ॥

ನಾಡನುಡಿಯ ನಾಡನಡೆಯ ನಾಡಿನಲ್ಲಿ ನಡಿಸುವ।
ಕಾಡುತಿರುವ ಕಾಡುಜನರ ಕೋಡುತಾನೆ ಉಡಿಯುವ॥

ನಾಡಮೇಲ್ಮೆ ನೋಡಿಯೊಡಲು ಪೊಡವಿಯೊಡೆಯ ನಡೆಯಲು।
ಬೇಡಿಕೊಂಡು ಪೊಡವಿಗಿಳಿದು ಬಡವರಿಂಗೆ ಬಡಿಸಲಿ॥

ಚತುರತನದೆ ಜಾತಿಮತವ ರೀತಿ ನೀತಿಗಿಳಿಸುವ।
ಜಾತಿಮತಕೆ ಸೋತುಬಿದ್ದ ಮಾತೆಯನ್ನು ಎತ್ತುವ॥

ಜಾತಿ ಬೆಳೆಸಿ ಆತುಕೊಂಡು ಘಾತಿಸಿಪ್ಪ ಜನರನು।
ಭೀತಿ ಬಿಡಿಸಿ ಹೂತುಬಿಟ್ಟು ಸಾತಿಶಯದೆ ಮೆರೆಯುವ॥

ನನ್ನ ಮಾತು ನಿನ್ನ ಮಾತು ಹೊನ್ನಮಾತದೆನ್ನದೆ।
ಉನ್ನತಾಗ್ರಸಭೆಯ ಮಾತ ಮನ್ನಿಸೆಲ್ಲ ನಡೆಯುವ॥

ಕಾವನನ್ನು ಕಾಂಬ ಬಗೆಯ ಕಾಣೆ ಬೇರೆ ತರದಲಿ।
ನಾಡಸೇವೆಗಾಗಿ ತನುವ ನೀಡೆ ದೇವ ಕಾಂಬನು॥

ದೇವರಿಂದ ಬಂದ ನಾವು ದೇವರಾಗಿ ಮೆರೆಯುವ।
ಜೀವಕಂಜಿ ಹೆದರಿ ಹೆದರಿ ಸಾವ ಜನರ ತೊರೆಯುವ॥

ನಾಡಧರ್ಮ ರೂಢಿಯಲ್ಲಿ ನಾಡ ತಾನೆ ನಡಿಸುವ।
ನಾಡದೇವಿ ಬೀಡಿನಲ್ಲಿ ಕೂಡಿಯಾಡಿ ಮೆರೆಯುವ॥

ಲೇಖಕರು : ಸ. ಪ. ಗಾಂವಕರ
('ನಾಡಹಾಡುಗಳು', ಮುದ್ರಿತ : ಮಿಂಚಿನಬಳ್ಳಿ)

## ೫. ಭಾರತಾಂಬೆಯ ಹೀನ ಸ್ಥಿತಿ

ಭಾರತಾಂಬೆಯ ಹೀನ ಸ್ಥಿತಿಯನು ಕಣ್ಣು ತೆರೆಯುತ ನೋಡಿರಿ।
ಪಾರತಂತ್ರ್ಯದಿ ಸಿಲುಕಿ ಬಳಲುವ ತಾಯಿಯನು ನೀವ್ ಬಿಡಿಸಿರಿ ॥ಪಲ್ಲವಿ॥

ಒಮ್ಮೆಯಾದರೂ ದೇಶಸೇವೆಯ ಮಾಡಿ ಪುಣ್ಯವ ಪಡೆಯಿರಿ।
ಉಮ್ಮಳಿಸುತಿಹ ಭರತಭೂಮಿಯ ಸುಖದ ಯುದ್ಧಕೆ ನಡೆಯಿರಿ ॥೧॥

ನಮ್ಮ ನಾಡಿನ ಹೆಣ್ಣು ಮಕ್ಕಳು ವೀರಶ್ರೀಯನು ಬೀರುತ।
ಒಮ್ಮನಸಿನೊಳೆ ರಾಷ್ಟ್ರಕಾರ್ಯಕೆ ಪ್ರಾಣಕೊಡುತಿಹರಲ್ಲವೇ ॥೨॥

ನಮ್ಮ ದೇಶದ ಸಿರಿಯು ಎಲ್ಲವು ಅನ್ಯ ದೇಶವ ಸೇರಿತು।
ಒಮ್ಮೆಯಾದರೂ ಹೊಟ್ಟೆತುಂಬಾ ಅನ್ನಸಿಗದಂತಾಯಿತು ॥೩॥

ಸಕಲ ಸಂಪತ್ತುಗಳ ಶಿಖರವ ಪಡೆದ ನಮ್ಮೀ ದೇಶವು।
ವಿಕಲವಾಗುತ ಪಾರತಂತ್ರ್ಯದಿ ಸಿಲುಕಿ ಆಯಿತು ನಾಶವು ॥೪॥

ದೇಶಸೇವೆಯ ಸಮರಕಾಲದಿ ಪ್ರಾಣಹೋದರು ನೋಡದೇ।
ದೇವಕೃಪೆಯನು ಪಡೆದು ದೇಶವನುಳಿಸಿಕೊಳ್ಳಲು ನಡೆಯಿರಿ ॥೫॥

ಲೇಖಕರು : ತಿಳಿಯದು
('ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಸಮರ' ಸಂಗ್ರಹದಿಂದ)

# ೬. ಪುಣ್ಯ ಭೂಮಿ

ಪುಣ್ಯಭೂಮಿ ಭಾರತೀ, ರಮ್ಯಭೂಮಿ ಭಾರತೀ।

ಹಿಮಗಿರಿ ಕನ್ಯಾಕುವರಿ ವಿಹಾರೇ,
ಗೌರೀಶಂಕರ ತುಂಗ ಸಮೀರೇ,
ಪೂರವ ಪಶ್ಚಿಮ ಸಾಗರಧಾರೇ॥

ಸಿಂಧೂ ಗಂಗಾ ಸುರಜಲ ರಂಗ,
ಆ ಕಾವೇರಿಯ ಸಲಿಲ ತರಂಗ,
ಋಷ್ಯಾಶ್ರಮಗಳ ಕೀರ್ತಿ ಪತಂಗ॥

ಗಿರಿಕಂದರವನ ಕುಂಜಕುಟೀರೇ,
ಲಲಿತ ಲತಾಸುಮ ಪರಿಮಳ ಧಾರೇ,
ಮಂಜುಳ ಖಗಕುಲ ಕಂಠವಿಹಾರೇ ॥

ಮಲೆಯಾಭರಣದ ಚಂದನ ರಂಜಿಸಿ,
ಶಾಲಿಯವನಗಳ ಸ್ವರ್ಣ ಪ್ರಕಾಶಿಸಿ,
ಜೀವನ ಸುಖಸಾಮ್ರಾಜ್ಯ ಕಿರೀಟಿಸಿ॥

ಜೋಗ ಅಜಂತದ ಕೀರ್ತಿಯ ಕಿರಣೆ,
ತಾಜಾಮಹಲಿನ ದಿವ್ಯಾಭರಣೆ,
ಜಕಣನ ಶಿಲ್ಪದ ಶೋಭಾವರಣೆ॥

ಪ್ರಾಚ್ಯಕಲಾಧ್ರುಮ ಕುಸುಮಿತ ನಯನೆ,
ಪಾವನ ಧರ್ಮವಿರಾಜಿತ ವದನೆ,
ಮಾನವಕುಲ ಕಲ್ಯಾಣದ ಸದನೆ॥

**ಲೇಖಕರು : ತಿಳಿಯದು**

('ಜೈ ಭಾರತ ರಾಷ್ಟ್ರಗೀತೆಗಳು' ಸಂಗ್ರಹದಿಂದ)

## ೭. ಸ್ವರಾಜ್ಯ ಮಂಗಳ

ರಾಗ : ಕಲ್ಯಾಣಿ, ರೂಪಕತಾಳ

ಜೈ ಭಾರತ ಭೂಮಿಗೆ ಮಾತೆಗೆ
ಜೈ ಪಾವನ ಮೂರ್ತಿಗೆ
ಸನ್ಮಂಗಳವಾಗಲಿ ಸತತಂ॥

ಸ್ವರಾಜ್ಯಾಭಿಲಾಷಿಗಳಿಗೆ
ಸರಕಾರದ ಸಹಾಯ ತೊರೆದ
ವೀರಭಾರತೀಯರಿಗೆ ॥೧॥

ಧಾರುಣಿಯಲಿ ಜೀವಿತವನು
ಸ್ವರಾಜ್ಯಕ್ಕೆ ಧಾರೆಯೆರೆದ
ಧೀರಕರ್ಮ ವೀರರಿಗೆ ॥೨॥

ದೇಶಸೇವೆಯಿಂದ ಸುಖಿಪ
ದೇಶಾಭಿಮಾನಿಗಳಿಗೆ
ದೇಶ ಬಾಂಧವರಿಗೆ ಸದಾ ॥೩॥

(ಮುದ್ರಿತ)

**ಇನ್ನೊಂದು ಪಾಠ :**

ದೇಶಸೇವೆಯಿಂದ ಸುಖಿಪ
ದೇಶಾಭಿಮಾನಿಗಳಿಗೆ
ದೇಶ ಬಾಂಧವರಿಗೆ ಸದಾ ॥೧॥

ಭೀಷ್ಮದ್ರೋಣ ಪರಶುರಾಮ
ಭೀಮಾರ್ಜುನಾದಿ ಸುತರ
ಧೀರಕರ್ಮ ವೀರರಿಗೆ ॥೨॥

ರಾಮಕೃಷ್ಣ ಪರಮಹಂಸ
ವಿವೇಕಾನಂದ ಸುತರ
ಪೆತ್ತ ವೀರ ಮಾತೆಗೆ ॥೩॥

ಲೇಖಕಿ : ತಿರುಮಲೆ ರಾಜಮ್ಮ ('ಭಾರತಿ')
(ಸಂಗ್ರಹ : ಶ್ರೀಮತಿ ಟಿ. ನ. ವೆಂಕಮ್ಮ, ಬೆಂಗಳೂರು)

# ೮. ಕರ್ನಾಟಕ ವೀರರೇಳಿ

ಕರ್ನಾಟ ವೀರರೇಳಿ! ರಣಭೇರಿ ಕೊಂಬ ಕೇಳಿ।
ಸ್ವಾತಂತ್ರ್ಯ ಮಂತ್ರವನು ಹೇಳಿ। ಪರದಾಸ್ಯ ದೇಹ ಸೀಳಿ ॥ಪಲ್ಲವಿ॥

ಪರತಂತ್ರ ಕತ್ತಲೆಯು ಹಾರಿ। ಸ್ವಾತಂತ್ರ್ಯ ಸೂರ್ಯ ತೋರಿ॥
ಭಾರತೀಯ ಜೀವ ಕಳೆಯೇರಿ। ಪರವೈರಿಗಾಯ್ತು ಮಹಾಮಾರಿ ॥೧॥

ಧುರಧೀರ ಬುಕ್ಕ ಮಾಧವರು। ಪುಲಕೇಶಿ ವೀರ ವಿಕ್ರಮರು॥
ಸ್ವಾತಂತ್ರ್ಯ ಮಂತ್ರ ಸಾರಿದರು। ಪರರಾಜರನ್ನು ಮೆಟ್ಟಿದರು ॥೨॥

ಲಾಲಾಜಿ ಲಾಠಿ ಹೊಡೆತದಲ್ಲಿ। ಕಲಿ ಜತಿನದಾಸ ಬಹುಬಳಲಿ॥
ನಿಮಗಾಗಿ ಕೊಟ್ಟರಾತ್ಮ ಬಲಿ। ಕುಳಿತಿಹರು ನಗುತ ಸ್ವರ್ಗದಲಿ ॥೩॥

ಭಾರತದ ರಕ್ತವನು ಹೀರಿ। ವೀರತೆಯ ಕುಕ್ಕಿ ನೆಲಕೂರಿ॥
ಭಾರತಿಯ ಮಾನವನು ಮಾರಿ। ಮಾಡಿದರು ನಾಡ ಸೆರೆಸೂರಿ ॥೪॥

ಹಿಂದೀಯ ಸಾರ್ವಭೌಮಾ। ಆ ಗಾಂಧಿಯೇ ಮಹಾತ್ಮಾ॥
ಸ್ವಾತಂತ್ರ್ಯಕ್ಕಾಗಿ ಕಲಿಭೀಮ। ಸೇನಾನಿ ನಿಂತ ನಿಸ್ಸೀಮ ॥೫॥

ಸ್ವಾತಂತ್ರ್ಯ ಸ್ವಾಭಿಮಾನ। ಹೊಮ್ಮಿಕ್ಕಿ ಕಾದಿರಣ್ಣ॥
ಧುಮ್ಮಿಕ್ಕಿ ರಣದೊಳಿನ್ನಾ। ಹಗೆಯನ್ನು ಮೆಟ್ಟಿರಣ್ಣಾ ॥೬॥

**ಲೇಖಕರು : ಜಿ. ರಾಮರಾವ ಹೆಜೀಬ**

('ಬೆಳಗಾವಿ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಸಮರ' ಸಂಗ್ರಹದಿಂದ. ಇವರು ಧಾರವಾಡ ರಾಷ್ಟ್ರೀಯ ಶಾಲೆಯ ವಿದ್ಯಾರ್ಥಿಗಳಾಗಿದ್ದರೆಂದಷ್ಟೇ ತಿಳಿದಿದೆ. ಜನಪ್ರಿಯವಾಗಿದ್ದ ಹಾಡು ಇದು)



## ೯. ಸ್ವಾತಂತ್ರ್ಯ ಎಂದು ದೊರಕುವುದು ?

ಸ್ವಾತಂತ್ರ್ಯ ಎಂದು ದೊರಕುವುದು ನಮ್ಮ ದೇಶಕಾದಿನ ||ಪಲ್ಲವಿ||

ಇಬ್ಬರ ಜಗಳಾಟದಿಂದ ಮೂರನೆಯವನು ।
ಕೊಬ್ಬುವನೆಂಬುದು ತಿಳಿದು ಕಾರ್ಯಗೈದೊಡೆ ||೧||

ಹೊಲಮನೆ ಬಂಧುಗಳ ಸೌಖ್ಯ ತೊರೆವುದಲ್ಲದೆ।
ನಲುಮೆಯ ಪ್ರಾಣವನು ಚೆಲ್ಲಲಂಜದಿರ್ದೊಡೆ ||೨||

ನನ್ನ ದೇಶ ನನ್ನ ಜನರು ನನ್ನೊಡವೆಗಳು
ಎನ್ನುವುದಭಿಮಾನ ನಮ್ಮೊಳಿರುವುದಾದೊಡೆ ||೩||

ಸತಿ ಸುತ ಪಿತ ಮಿತ್ರ ಪರಸ್ಪರರು ನಾಡಿನ।
ಹಿತಕಾಗಿಯೇ ಮೋದದಿಂದ ಕಾರ್ಯಗೈದೊಡೆ ||೪||

ಎದ್ದರೆ ಸ್ವಾತಂತ್ರ್ಯ ಸ್ವಾತಂತ್ರ್ಯ ಕುಳಿತರೆ।
ಬಿದ್ದರೆ ಕನಸಿನೊಳು ಸ್ವಾತಂತ್ರ್ಯ ನೆನೆದೊಡೆ ||೫||

ಲೇಖಕರು : ರಾ. ವೆ. ಕರಿಗುದರಿ
('ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಸಮರ' ಸಂಗ್ರಹದಿಂದ)

## ೧೦. ಸುಮ್ಮನೆ ದೊರಕುವುದೇ ಸ್ವರಾಜ್ಯ ?

ಸುಮ್ಮನೆ ದೊರಕುವುದೇ ಸ್ವರಾಜ್ಯವು। ಸುಮ್ಮನೆ ದೊರಕುವುದೇ।
ಕಮ್ಮಗೆ ಕುಳಿತುಂಡು ಒಣ ಮಾತಾಡಿದರೇ ||ಪಲ್ಲವಿ||

ಮನದಲ್ಲಿ ದೃಢವಿರಬೇಕು। ಹೆಣ್ಣು। ಹಣಮಣ್ಣು
ಸುಖದಾಶೆಯ ಬಿಡಬೇಕು। ಜನುಮವ ತೃಣಮಾಡಬೇಕು।
ತನ್ನ । ತನುವ ದೇಶಕಾರ್ಯಕೀಡಾಡಬೇಕು ||೧||

ಭೇದ ಬುದ್ಧಿಯನಳಿಯಬೇಕು।ನಿಜ।
ಸೋದರ ಭಾವವೆಲ್ಲರೊಳಿರಬೇಕು।
ಕ್ರೋಧಾದಿಗಳ ನೀಗಬೇಕು । ಕಾರ್ಯ।
ಸಾಧಿಸಿಕೊಳ್ಳುವ ಧೀರತೆ ಮುಂಚೆ ಬೇಕು ॥೨॥

ಕಾಯ ಕಷ್ಟವ ಪಡಬೇಕು ।ಎಲ್ಲಾ।
ಮಾಯ ಪಾಶವ ಕತ್ತರಿಸಿ ಚೆಲ್ಲಬೇಕು ।
ಸಾಯಲಂಜಿಕೆ ಬಿಡಬೇಕು।ಯದು।ರಾಯ
ಕೃಷ್ಣನ ಗೀತೆಯನು ನಂಬಬೇಕು ॥೩॥

(ಲೇಖಕರು : ತಿಪ್ಪಯ್ಯ ಮಾಸ್ತರ್ ಅಥವಾ ಮುದವೀಡು ಕೃಷ್ಣರಾವ್. ತಿಪ್ಪಯ್ಯ ಮಾಸ್ತರರ ಹಾಡುಗಳ ಸಂಗ್ರಹ 'ರಾಷ್ಟ್ರೀಯ ಪದ್ಯಗಳು' 1930ರಲ್ಲಿ ಈ ಹಾಡು ಬಂದಿದೆ. ಆದರೆ 'ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಸಮರ' ಸಂಪುಟ 2ರಲ್ಲಿ ಮುದವೀಡರ ಹೆಸರು ಸೂಚಿಸಿದೆ. ಕೊನೆಗೆ ಬಂದಿರುವ 'ಯದುರಾಯ ಕೃಷ್ಣನ ಗೀತೆಯನು ನಂಬಬೇಕು' ಎಂಬಲ್ಲಿ 'ಕೃಷ್ಣ' ಎಂಬುದು ಮುದವೀಡರ ಮುದ್ರಿಕೆಯೇ? ಅಥವಾ ಭಗವದ್ಗೀತೆಯ ಉಲ್ಲೇಖವೆ ? ಮುದವೀಡರು ತಮ್ಮ ಬೇರೆ ಹಾಡುಗಳಲ್ಲಿ ಮುದ್ರಿಕೆ ಬಳಸಿಲ್ಲ. ಹೀಗಾಗಿ ಇದು ತಿಪ್ಪಯ್ಯ ಮಾಸ್ತರರ ಕವಿತೆ ಇರಬೇಕು)

## ೧೧. ಸೇವಾದಲದ ಸೈನಿಕರು

ಭಾರತ ಮಾತೆಯ ಮಕ್ಕಳು ನಾವು । ಸೇವಾದಲದ ಸೈನಿಕರು॥

ಭೇದ ಭಾವವು ನಮ್ಮಲಿಲ್ಲ
ಜಾತಿ ಭೇದವು ಸನಿಹದೊಳಿಲ್ಲ
ಎರಡು ತನವು ಕನಸಿನೊಳಿಲ್ಲ
ವೈರಿತನವು ನೆನಪಿನೊಳಿಲ್ಲ॥

ದೇಶೋದ್ಧಾರವೆ ನಮ್ಮಯ ಆಟ
ತ್ರಿವರ್ಣ ಧ್ವಜವೇ ನಮ್ಮಯ ಬಾವುಟ
ಧ್ವಜದಡಿಯೇ ನಮ್ಮಯ ರಾಹುಟಿ
ಜೀವನ ಮಂತ್ರವು ನಮ್ಮಯ ರಾಟಿ॥

ಆತ್ಮ ತೇಜವೆ ನಮ್ಮಯ ಶಕ್ತಿ
ಸ್ವಾರ್ಥತ್ಯಾಗವೇ ನಮ್ಮಯ ಯುಕ್ತಿ
ಮೇಲಪ್ಪಣೆಯೇ ನಮ್ಮಯ ಕತ್ತಿ
ಇದರಿಂ ನಿಶ್ಚಯ ಭಾರತ ಮುಕ್ತಿ॥

**ಲೇಖಕರು : ತಿಳಿಯದು**
('ಸೇವಾದಲ ಗೀತೆಗಳು', ಧಾರವಾಡ, 1946)

## ೧೨. ರಣಗೀತ

ಬರುವುದು ಬರಲೆಂದೆನ್ನುವೆವು।
ಪರದಾಸ್ಯವನಿಂದಳಿಸುವೆವು॥

ಬಿಸಿಲನು ಚಳಿಯನು ಲೆಕ್ಕಿಸೆವು।
ಹಸಿವಿನ ಕಿಚ್ಚನು ಸಹಿಸುವೆವು॥

ಬೆತ್ತದ ಬಡಿತವ ತಿನ್ನುವೆವು।
ಕತ್ತಿಯ ಕಡಿತವ ಸಹಿಸುವೆವು॥

ಕುಣಿಕುಣಿಯುತ ಹೋರಾಡುವೆವು।
ರಣದೊಳು ಶೌರ್ಯವ ತೋರುವೆವು॥

ನಗುತಲೆ ಶೂಲವನೇರುವೆವು।
ಜಗದೊಳು ಕೀರ್ತಿಯನುಳಿಸುವೆವು॥

ಹಾಡುತ ರಣದೊಳು ಸಾಯುವೆವು।
ನಾಡಿನ ಮಾನವ ಕಾಯುವೆವು॥

**ಲೇಖಕರು : ತಿಳಿಯದು**
('ಸೇವಾದಲ ಗೀತೆಗಳು', ಧಾರವಾಡ, 1946)

# ೧೩. ವಂದೇಮಾತರಂ

ರಾಗ : ಹಿಂದೂಸ್ಥಾನಿ  ತಾಳ : ಆದಿ
ಧಾಟಿ : "ಸಾರೇ ಜಹಾಂಸೆ ಅಚ್ಛಾ" ಎಂಬಂತೆ

ನಾವೆಂತ ಮನುಜರೇಳಿ? ಸ್ವಾತಂತ್ರ್ಯವಿಲ್ಲದವರು॥
ನೀವಾರು ಎನಲು ಪರರು? ನಿಮ್ಮ ದಾಸರೆನ್ನುವವರು ॥ಪಲ್ಲವಿ॥

ವಿಪಿನಾಂತ ಪಶುವಿಗಿಂತ। ಅಪಕೀರ್ತಿ ಪಡೆದು ಧರೆಲಿ॥
ಅಪಮಾನವಾಗಲೆಮಗೆ। ಉಪಮಾನವೆನ್ನುವವರು ॥೧॥

ದೇಶಾಭಿಮಾನವಿಲ್ಲ। ಲೇಸೈಕ್ಯಮತ್ಯವಿಲ್ಲಾ॥
ದಾಸಾನುದಾಸರಾಗಿ। ಪರಸೇವೆ ಮಾಡುವವರು ॥೨॥

ನಮಗಾಗಿ ಗಾಂಧಿಯವರೂ। ಶ್ರಮದಿಂದ ಹೋರುತಿಹರು॥
ಗಮನಿಸದೆ ನಮ್ಮ ಜನರು। ತಮ್ಮದೆಚ್ಚು ಎಂಬುವವರು ॥೩॥

ವರ್ಜಿಸದೆ ಮದ್ಯಪಾನ। ದುರ್ಬಲದಿ ನರಳಿ ಕಡೆಗೆ॥
ನಿರ್ಜೀವವಂತರಾಗಿ। ನಿರ್ಭಾಗ್ಯರೆನ್ನುವವರು ॥೪॥

ಪರಸೇವೆಹಿತವೆ ನಮಗೆ। ಗುರುಮಂತ್ರವೆನ್ನುತಿಹೆವು॥
ಭಾರತಿಯ ಪುತ್ರರಾಗಿ। ಪುರುಷಾರ್ಥವಿಲ್ಲದವರು ॥೫॥

ನಾರಿಯರ ಮೋಹದಿಂದ। ಮನೆಮಠಗಳೆಲ್ಲ ಮಾರಿ॥
ತಿರಿದುಂಬ ಜನರ ತೆರದಿ। ಬರಿದಾಗಿ ನರಳುವವರು ॥೬॥

ಲಾಲಾಜಿ ಭಗತಸಿಂಗ। ಶುಕದೇವ ರಾಜಗುರುವು।
ಬಲಿಯಾಗೆ ದೇಶಹಿತಕೆ। ಕರತಾಳ ಹೊಡೆಯುವವರು ॥೭॥

ಶ್ರೀಪತಿಯಸಖನೆ ನಿಮ್ಮ। ಭೋಪರಿಲಿ ಬೇಡುತಿಹೆವು।
ನೀ ಪೊರೆಯೊ ನೀಲಕಂಠ। ಕಾಪಾಡು ಎನ್ನದವರು ॥೮॥

ಲೇಖಕರು : ಬಿ. ನೀಲಕಂಠಯ್ಯ (ಮುದ್ರಿತ)
'ರಾಷ್ಟ್ರಗೀತಾವಳಿ'ಯಿಂದ, (ತಾರೀಖಿಲ್ಲ)

# ೧೪. ದೇಶೀಯ ದುಮದುಮ್ಮೆ

## ಪ್ರಾರ್ಥನೆ

ಪರದಾಸ್ಯ ಪಾಶದ ಬೇಡಿಯ ಕಡಿಯುವ ಬಗೆಯನು ಕೇಳಿರಿ ದೇಶದ ಜನರೇ।
॥ಮಾತರಂ ವಂದೇ ಮಾತರಂ ॥ಪಲ್ಲವಿ॥

ಅರವಿಂದನಾಭನ ಸುರವಂದ್ಯ ಪಾದವ ಶಿರದೊಳು ವಿನಯದಿ।
ಧರಿಸುವೆನು। ನಾನು । ಸರಸತಿ ಪಾದಕೆ ನಮಿಸುವೆನು । ಬಲು।
ಕರುಣದಿ ಮತಿಯನು ಬೇಡುವೆನು। ಪರದಾಸ್ಯ ಬೇಡಿಯ ಕಡಿಯಲು ।
ಬೇಡುವೆ ಸಾಸಿರ ಹೆಸರಿನ ಜಗದೀಶನನ್ನು॥

ತನುಮನ ಧನಗಳ ಸವಿಯನು ಸುರಿಸುವ ಭರತಮಾತೆಯ ಚರಣ
ಕಮಲವನು। ವರ । ತನಿಭಕ್ತಿ ರಸದಿಂದಲೆರೆಯುವೆನು । ಬಲು ।
ಕನಿಕರದಿಂದಲಿ ಬೇಡುವೆನು । ಮನದ ಬಯಕೆಯನ್ನು ಕೊನೆಗಾಣಿಸುವ
ನನ್ನ। ಮನದೊಳು ಹುರುಪನ್ನು ನಮಿಸಿ ಕೇಳುವೆನು॥

ದೇಶಕೋಶವ ಬಿಟ್ಟು ದೇಶಸೇವೆಯ ಮಾಡಿ ತೊಳಲುವ ಮೋಹನದಾಸರನು।
ಆಹಾ । ಗಾಸಿಯಾಗಿರುವಂಥ ದಾಸರನು । ಬಲು
ಸೋಸುವ ಲಜಪತರಾಯರನು। ದೇಶದೇವಿಯ ವರಚರಣಕಮಲವನ್ನು
ಶಿರದೊಳು ಧರಿಸಿದ ತಿಲಕರ ನಮಿಸಿ ॥

## ಪರದೇಶಿಗಳ ಆಗಮನ ಹಾಗೂ ಪರಿಣಾಮ

ತಕ್ಕಡಿ ಹಿಡಕೊಂಡು ಬೇಪಾರ ಮಾಡುತ ಬಿಳುಪಾದ ಪರಕೀಯ
ಜನರೆಲ್ಲರೂ। ಬಂದು। ಕಕ್ಕಸಬಡುತಲಿ ಕೂಡಿದರು।ನಮ್ಮ।
ಉಕ್ಕುವ ನಾಡನು ಕೆಡಿಸಿದರು। ಯುಕ್ತಿಯ ಬಲದಿಂದ ನೆಕ್ಕುತ
ರಾಜ್ಯವ ರಾಜಕಾರಣವನ್ನು ಭರದಿ ಹೂಡಿದರು॥
ಬಗೆಬಗೆ ಬೆಳೆಯಿಂದ ಸೊಗಸಾಗಿ ಮೆರೆಯುವ ಮಿಗಿಲಾದ ಬಂಗಾಲ
ರಾಷ್ಟ್ರವನು। ಬಲು। ಸೊಗಸಾದ ಕರ್ನಾಟದೇಶವನು। ವೀರ।
ಮೊಗದ ಪಂಜಾಬದ ಭೂಮಿಯನು। ಮಿಗಿಲಾದ ಮಹಾರಾಷ್ಟ್ರ
ದೇಶವ ಮೋಸದಿ ಭರದಿಂದ ಸಮನಾಗಿ ವಶಮಾಡಿಕೊಂಡರು॥

ವೇದಾಂತದಾಕಾಶದೊಳಗೆ ಮಿನುಗುವಂಥ ಸಾಧುಸಂತರ ಭಾಷೆ
ಯೊಳಗೆ ಮೂಡಿ। ತನ್ನ । ಕದಲದ ಹೊಳಪನು ಜಗಕೆ ನೀಡಿ । ನಮ್ಮ
ಕವಲಾದ ಹಾದಿಯ ತಿರುಗಿ ತೀಡಿ । ಕಾದುತ ಜಗವನು ಮರೆಯಾದ
ನಯ್ಯಯ್ಯೋ ಹಾದಿಯ ತೋರುವ ಸ್ವಾತಂತ್ರ್ಯ ರವಿಯು॥

ವೀರರ ಕರದೊಳು ಮಿನುಗುವ ಕತ್ತಿಗಳೆಲ್ಲೆಲ್ಲಿ ನೋಡಲು ಹೋದ
ವಯ್ಯ। ಚಾಕು । ಚೂರಿ ಕತ್ತರಿ ಕತ್ತಿ ಬಂದವಯ್ಯ । ಮಾರು ।
ಮಾರುದ್ದ ಚತ್ತರಗಿ ಛತ್ರವಯ್ಯ । ಕಾರುತ್ತ ವಿಷವನು ಪರದಾಸ್ಯ
ರಾಹುವು ನುಂಗಿದನಯ್ಯಯ್ಯೋ ಸ್ವಾತಂತ್ರ್ಯ ಶಶಿಯಾ॥

ಶೂರರ ಶೌರ್ಯವ ಕಡಿದರು ನೋಡಿರಿ ವೀರರ ವೀರ್ಯವ ಕುಕ್ಕಿದರು । ಸರ
ಕಾರದ ದಾಸರು ಸೊಕ್ಕಿದರು । ದರ । ಕಾರವಿದೆ
ರಾಜ್ಯವಾಳಿದರು । ಧೀರತನವ ತುಂಡು ತುಂಡಾಗಿ ಕಡಿದರು
ಗಂಡಸುತನವನು ಮೊಂಡುಮಾಡಿದರು ॥

ಪರದೇಶದರಸನ ದಾಸರು ಸರಸಾಗಿ ರಕ್ಷಣೆ ಮಾಡುತ್ತಲಿರುತಿಹರು
ನಮ್ಮ।ಸುರವಂದ್ಯ ದೇಶದಲಿರುತಿಹರು। ತಮ್ಮ । ವರರಾಜ್ಯ
ರಥವನು ಹೂಡಿದರು। ಕರ ರೂಪದಿಂದೆಮ್ಮ ರೈತರ ಹಣವನು ಹಗಲಿರುಳಿಲ್ಲದೆ
ನುಂಗುತ್ತಲಿಹರು ॥

ಜಾಡಬುಡ್ಡವು ತನ್ನ ಗಾಢ ಜಾಳಿಗೆಯಿಂದ ನೋಡದೆ ನೊಣವನು ಬಿಗಿಯುವಂತೆ। ಕಾಡು। ಮೋಡವು ಮುಗಿಲನು ಮುತ್ತುವಂತೆ। ವಿಷ ನಾಡಿಯು ನಾಡನು ಕಡಿಯುವಂತೆ। ಕಾಡರೈಲಿನ ಗಾಢ ಜಾಳಿಗೆಯೊಳಗೆಮ್ಮ ನಾಡನು ಬಿಗಿಯಾಗಿ ಬಿಗಿಸಿದರಯ್ಯೋ॥

ಪರಕೀಯ ರಾಷ್ಟ್ರದ ರೇಲಿನವರು ಬಂದು ಗಾಡಿಕಾರರ ದುಡ್ಡು ನುಂಗಿದರು। ನಮ್ಮ। ಸರಸಾದ ಭೂಮಿಯ ಕೆಡಿಸಿದರು। ನಮಗೆ। ಪರಮ ಕಲ್ಯಾಣವ ಮಾಡಿದರು। ಕರರೂಪದಿಂದೆಮ್ಮ ಧನವನ್ನು ಹೀರುತ್ತ ತಿರುಕರಾಗಿರಿಯೆಂದು ಹರಿಸಿದರೆಮ್ಮನು॥

ವ್ಯಾಪಾರ ಮುಳುಗಿತು ಬೇಸಾಯ ಬಾಡಿತು ಬರಗಾಲ ಬಿದ್ದಿತು ನಾಡಿನೊಳು। ಬೇನೆ। ತಾಪದಿ ಬಳಲುತ ಸೀಮೆಯೊಳು। ಜನಕೆ। ಶಾಪವನೀಯುತ ನಾಡಿ ನೊಳು। ಶೀಪುತ್ತ ಹುಲ್ಲನ್ನು ಕುಡಿಯುತ್ತ ನೀರನ್ನು ಸತ್ತರಲ್ಲವೆ ನೂರು ಸಾವಿರ ಜನರು॥

ತಾರು ಪೋಸ್ಟುಗಳೆಲ್ಲ ಬಂದವು ನಮ್ಮನ್ನು ಪರದಾಸ್ಯದೊಳು ನೂಕಿ ತುಳಿಯ ಲಕ್ಕೆ। ನಮ್ಮ। ಬೇರುಗಳೆಲ್ಲನು ಕಿತ್ತಲಿಕ್ಕೆ। ತಮ್ಮ। ನೂರಾರು ಕಪಟವ ಬಿತ್ತಲಿಕ್ಕೆ। ಸೂರಿಮಾಡಿದ ನಮ್ಮ ಸ್ವಾತಂತ್ರ್ಯ ವೃಕ್ಷದ ನೂರಾರು ಹರಿಗಳ ತರಿದು ಬಿಡಲಿಕ್ಕೆ॥

## ಆಂಗ್ಲರ ರಾಜ್ಯಭಾರ

ದಾಸ್ಯಪಾಶವು ಬಂದು ಕೊರಳನು ಬಿಗಿದಿತು ನಾಡೆಲ್ಲ ದುಃಖದಿ ಮರುಗುವಂತೆ। ಅಮಾ। ವಾಸ್ಯೆಯು ಜಗವನು ಮುತ್ತುವಂತೆ। ಯಮನಾಸ್ಯವು ಜನರನ್ನು ನುಂಗುವಂತೆ। ಹಾಸ್ಯದ ಮಾತಲ್ಲ ರೈತರ ದಾಸ್ಯವು ಯಮರಾಜನಾಸ್ಯದ ತಲೆಯ ಮೇಲಾಯ್ತು॥

ಕೂಳಿಲ್ಲದಂತಹ ರೈತರ ಗೋಳನ್ನು ಬಣ್ಣಿಸಬೇಕ್ಯಾರು ಜಗದೊಳಗೇ। ವಿಷ। ಚೇಳಿನ ತಾಪವ ಮನದೊಳಗೇ। ನೀವು। ತಿಳಿದುಕೊಳ್ಳಿರಿ ಮಾತು ಒಡ ಲೊಳಗೇ। ಜೋಳವಿಲ್ಲದ ಬಡ ರೈತರ ಧನವನು ಹೀರುವ ಸರಕಾರ ಸರಕಾರ ವಲ್ಲಾ॥

ಗವರ್ನರ ಜನರಲ್ಲನೆಂಬುವ ದಾಸಗೆ ಎರಡೂವರಿಲಕ್ಷ ರೂಪಾಯ್ಗಳೂ। ಎಂಟು। ಗವರ್ನರ ಜನರೀಗೆ ಲಕ್ಷಗಳೂ । ಅವರ । ನೂರಾರು । ದಾಸರ ಕೋಟಿಗಳೂ । ಎಷ್ಟೆಂದು ಹೇಳಲಿ ಕಷ್ಟದಿ ಹೇಳುವೆ ಕರಡಿಯ ನುಣುಪಾದ ಕೂದಲ ದಷ್ಟು ॥

ಎರಡೆರಡು ಸಾವಿರ ಕಲೆಕ್ಟರ ಜನರಿಗೆ ತಿಂಗಳದೊಳಗಿಷ್ಟು ಬರಿದಾಯಿತು ॥ ನಮ್ಮ । ಕರಿಗಾಲದೊಳು ಪ್ಲೇಗು ತಲೆಯೆತ್ತಿತು । ನಾಡ । ಗಾರರು ತೊಳಲುವ ಕಾಲ ಬಂತು । ಪರದೇಶದಿಂ ಬಂದ ಪರಕೀಯ ಜನರಿಗೆ ಸೂರಿಯಾಯಿತು ನಮ್ಮ ದ್ರವ್ಯದ ಸುಗ್ಗಿ ॥

ಭಾರತ ದೇಶವ ಪರತಂತ್ರ ಕೆಸರೊಳು ಹಾಕಿ ತುಳಿಯುವಂಥ ಬಿಳಿಯರಿಗೆ । ನಮ್ಮ । ನೂರಾರು ಸೋಲ್ಜರ ಗೆಳೆಯರಿಗೆ । ಮತ್ತ । ಕರಿಯಾಳುಗಳ ಕೋಟಿ ಜನಗಳಿಗೆ । ಕರುಣದ ಸರಕಾರ ಒಡಲೊಡೆಯುವ ಹಾಗೆ ಸುರಿದಿತು ರೈತರ ರಕ್ತದ ಧನವಾ ॥

ಕಷ್ಟವ ಮಾಡುತ ಹೊಟ್ಟೆಯ ಹೊರೆಯುವ ಆಂಗ್ಲ ದೇಶದ ಕೀಳು । ಜನ ಗಳನು ನೀತಿ ಭ್ರಷ್ಟರಾಗಿರುವಂಥ ಮನುಜರನು ಅತೀ । ದುಷ್ಟತನದ ಹಾಳು ಮನುಜರನು । ಕಷ್ಟದಿ ಬಾಳುವ ಧರ್ಮವ ದೇಶದಿ ತಡೆಯಿಲ್ಲದಲೆ ತಂದು ತುಂಬುತ್ತಲಿಹರೈ ॥

ಬಡವರ ಕಡೆಗೊಮ್ಮೆ ನೋಡಿರಿಯೆಂದರೆ ಕಾಲೊಳು ಬೇಡಿಯ ಜಡಿಯುವರು। ಕಪ್ಪು । ಕಡಲಿನ ನೀರನು ಕುಡಿಸುವರು । ತಮ್ಮ । ಬಡಿವಾರ ನಾಡೊಳು ನಡಿ ಸುವರು । ಪೊಡವಿಯೊಳಗೆ ಯಶಬಡೆದಂಥ ಬಡವರ ಒಡಲಿಗೆ ಕರುಣದಿ ಬಡೆವರು ಕೇರು ॥

## ಪರದೇಶದೊಡವೆಗಳು

ಪರದೇಶದೊಡವೆಯ ಪಿಡುಗು ಬಂದಿತು ನಮ್ಮ ಪರಮಪಾವನವಾದ ನಾಡಿ ನೊಳು । ತರ । ತರದ ಬಣ್ಣದ ಮಾಯಾ ಮೋಹಗಳು । ಬಲು । ಸರಸಾದ

ಸೊಗಸು ಸಾಮಾನುಗಳು । ಶಿರದಿಂದ ಹಿಡಿಕೊಂಡು ಕಾಲ್ತುದಿ ತನಕೆಲ್ಲ ಬಡಿದಿತು ಪರದೇಶ ಮಾಲಿನ ಮೈಲಿ ॥

ಶೂರರ ಕೈಯಲ್ಲಿ ಹೊಳೆಯುವ ಶಸ್ತ್ರವು ಸ್ವಾತಂತ್ರ್ಯವಿರುವಾಗ ಮಿನುಗುವದು । ಈಗ । ಕರದೊಳು ಕರವಸ್ತ್ರ ಮಿನುಗುವದು । ಬಲು । ಭರದಿಂದ ಚತ್ತರಿಗಿ ಕುಣಿಯುವದು । ಪರದೇಶಿ ಮಾಲಿನ ಗುಡುಗೊಡೆದಿತು ನಮ್ಮ ಬಡವರ ದೋರೆಯ ನುಣುಪಾದ ಎದೆಯಾ ॥

ನುಣುಪಾದ ಕಾಜಿನ ಸೊಗಸಾದ ಸಾಮಾನು ಗಿರಣಿಯ ನಯವಾದ ಅರಿವೆಗಳೂ।

ಬಣ । ಬಣಗಿನ ಚೀಟಿನ ಥಾನುಗಳೂ । ಕಣ । ಕಣಿಸುವ ಕಬ್ಬುಸಿ ಭಾಂಡಿಗಳೂ । ಪ್ರಣತೀಯ ಸ್ಥಾನಕ್ಕೆ ಬಂತಲ್ಲೊ ಬಿದ್ದರೆ ಪಳ್ಳೆಂದು ಒಡೆಯುವ ಕಾಜಿನ ದೀಪಾ ॥

ಭತ್ತದ ಗಿರಣಿಯು ಹಳ್ಳಿಯ ಜನಗಳ ಹೆಂಡರ ಹೊಟ್ಟೆಗೆ ಬರೆಗೊಟ್ಟಿತು । । ಮತ್ತೆ । ಭತ್ತದ ವ್ಯಾಪಾರ ಕಟ್ಟಾಯಿತು । ಸುತ್ತು ಮುತ್ತಿನ ಜನರಿಗೆ ಕುತ್ತಾಯಿತು । ತುತ್ತಿಲ್ಲದಂತಹ ರೈತನ ಮಡದಿಯ ಒಡೆದು ಹೋಯಿತು ಚೆಲ್ವ ಮಾನದ ಮುತ್ತು ॥

ಗಿರಣಿಯ ಅರಿವೆಯು ಬಂದಕಾಲಕ್ಕೆ ನಮ್ಮ ಜಾಡರ ಹೊಟ್ಟೆಯು ಹೋಳಾಯಿತು ।

ಬಲು ಸರಸಾದ ನೇಯಿಗೆ ಹಾಳಾಯಿತು । ಅತಿ । ವಿರಸವಾಗಿರುವಂಥ ಬಾಳಾಯಿತು । ಜರದಿಂದ ಕೊರೆಯುತ್ತ ಜಾಡರ ಕರಳನ್ನು ಮೆರೆಯುತ್ತ ಬಂದಿತು ಮ್ಯಾಂಚೆಸ್ಟರರವಿ ॥

ಮುತ್ತೈದೆ ಕೊರಳೊಳು ಮುತ್ತು ಮಾಣಿಕದಿಂದ ಕಚ್ಚಿದ ವಜ್ರದ ಪದಕಗಳೂ। ತೋರ ಮುತ್ತಿನ ಸೀರುಳ್ಳ ಮಾಲೆಗಳು । ಸುತ್ತು ಮುತ್ತಲಿ ಹೊಳೆವ ಕಟ್ಟಾಣಿಗಳೂ । ಹತ್ತು ನಿಮಿಷದೊಳು ಬದಲಾಗಿ ಬಂದವು ಪರದೇಶಿ ಕರಿಮಣಿ ಪೈಗೊಂದು ಸಾಲು ॥

ಮುಟ್ಟೀರಿ ಮುಟ್ಟೀರಿ ಮೈಲಿಗೆ ಎಂದೆಂದು ಮಡಿಯ ಮಾಡಿರುವಂಥ ಮನೆಯೊಳಗೆ। ಬಲು ಶಿಷ್ಟರ ದೇವರ ಮನೆಯೊಳಗೆ। ಬಂತು। ಕೆಟ್ಟ ಸಮಯ ನಮ್ಮ ನಾಡೊಳಗೆ। ಕೆಟ್ಟ ಬಣ್ಣದ ಬಲು ನಯವಾದ ಮಡಿಗಳು ಬಂದವು ಅಡಿಗೆಯ ಮನೆಯೊಳಗೆಲ್ಲ ॥

ಎಷ್ಟೆಂತ ಹೇಳಲಿ, ದೇವರ ಗುಡಿಯೊಳು ದೇವರು ಪರದೇಶಿಯಾದನಲ್ಲ। ಅವನ। ಭ್ರಷ್ಟ ಪೂಜಾರಿಯ ದೇಹವೆಲ್ಲ। ಬಲು ದುಷ್ಟಾದ ಬಟ್ಟೆಯು ಬಂದಿತಲ್ಲ। ಕಷ್ಟದಿ ಹೇಳುವೆ ಮನಸಿಟ್ಟು ಕೇಳಿರಿ ಮ್ಯಾಂಚೆಸ್ಟರರವಿಯು ನಮ್ಮ ಹೆಣಕೆಲ್ಲ ॥

ಇದ್ದರೆ ಪರದೇಸಿ ಸತ್ತರೆ ಪರದೇಶಿ ಸುಟ್ಟರೆ ಪರದೇಶಿಯಾಯಿತಯ್ಯ। । ತನ್ನ। ಸದ್ದನು ತೋರದೆ ಬಂದಿತಯ್ಯ। ಇದು। ಮುದ್ದು ಕೆಂಡದ ಮಳೆ ಸುರಿಯಿತಯ್ಯ। ಇದ್ದರೆ ಹುರಿದೀತು ಸತ್ತರೆ ಸುಟ್ಟೀತು ಮೆದ್ದರೆ ಒಡಲನು ಸುಡುವದಯ್ಯಯ್ಯೋ ॥

ಬಡಿಗನು ಹರತಾದ ಬಾಚಿಯ ಮೊನೆಯಿಂದ ಎಳೆಯನು ಸಮನಾಗಿ ತರಿಯುವಂತೆ ।

। ಬಡ। ಆಡನ್ನು ಕಟಕನು ಕಡಿಯುವಂತೆ। ಬೇಟೆ। ಬಡಕನು ಮೊಲವನು ಸುಲಿಯುವಂತೆ। ಬಡವರ ಒಡಲೀನ ಕರಳನು ಕೊರೆದೀತು ಪರದೇಶೀ ಸರಕಿನ ಹರಿತಾದ ಚೂರಿ ॥

## ವಕೀಲರು

ಇಂಥ ಸೌಂದರ್ಯದ ರಾಜ್ಯವು ಇದರೊಳು ನ್ಯಾಯದ ಕಥೆಯನು ಹೇಳುವೆನು। ಕಲಿ। ತಂಥ ವಕೀಲರ ಗುಣಗಳನು। ಸಾಯು। ವಂಥ ಒಕ್ಕಲಿಗರ ದಾಳಿಯನು। ಪಂಥ ಹಾಕುವೆ ನಾನು ರೈತರ ರಕ್ತವ ಸುರಿಯದ ವಕೀಲರು ಭೂಮಿಯೊಳಿಲ್ಲ ॥

ವೇದಗಳರ್ಥವ ತಿಳಿಹೇಳಿ ಜಗಕೆಲ್ಲ ದಾರಿಯ ತೋರುವ ಬ್ರಾಹ್ಮಣರು। ಬಲು ಕಾದುತ್ತ ಮಡಿಯುವ ಕ್ಷತ್ರಿಯರು। ಮತ್ತು। ಬೀದಿ ಬೀದಿ ಕೂಳು ಕೊಡುವ–ವರು। ಭೇದವಿಲ್ಲದೆ ವೈಶ್ಯ ಶೂದ್ರರು ಕಳಕೊಂಡು ಸ್ವಾತಂತ್ರ್ಯ ರತ್ನವ ತಿರುಕರಾಗಿಹರು ॥

ಒಳಗೊಂದು ಶರ್ಟ್ಾತು ಮೇಲೊಂದು ಜಾಕೀಟು ಆಮೇಲೆ ಬಂತೊಂದು ಹೊಳೆವ ಕೋಟು । ತಲೆ । ಮೇಲೆ ಹಾಕುವರಯ್ಯ ಡಬರಿ ಹ್ಯಾಟು । ತಮ್ಮ । ಕಾಲೊಳು ಪರದೇಶಿ ಫುಲ್ಲುಬೂಟು । ಹುಳತಂಥ ತಲೆಯೊಳು ಕೊಳತಂಥ ಕಾಯಿದೆ, ಎಷ್ಟೆಂದು ಹೇಳಲಿ ವಕೀಲರ ಥಾಟು ॥

ಸಿಗರೇಟ್ಟು ಸೇದುತ್ತ ಬಡವರ ಒಡಲಿಗೆ ಬೆಂಕಿಯನಿಡುವಂಥ ಮನುಜರಿಗೆ । ಬಗೆ। ಬಗೆಯ ಒಯ್ಯಾರದ ಪಶುಗಳಿಗೆ । ಬಂತು ಸೊಗಸಾದ ಧನವೆಲ್ಲ ಕಟುಕರಿಗೆ । ಬಗೆಬಗೆ ಬಣ್ಣದ ನ್ಯಾಯವು ಬಂದಿತು ಪರಕೀಯ ರಾಜ್ಯದ ಕೋರ್ಟಿನೊಳಗೆಲ್ಲ॥

## ಬ್ರಿಟಿಷ್ ನ್ಯಾಯದೇವತೆಯು

ದುಡ್ಡಿದ್ದ ಮನುಜಗೆ ನ್ಯಾಯವು ಸಿಗುವುದು ದುಡ್ಡಿಲ್ಲದವನಿಗೆ ನ್ಯಾಯವಿಲ್ಲ । ಬಲು । ಹೆಡ್ಡ ವಕೀಲರು ಬಂದರಲ್ಲ । ನಮ್ಮ । ದುಡ್ಡನು ಹೀರುತ್ತ ಬೆಳೆವರಲ್ಲ । ದುಡ್ಡಿದ್ದ ದುರುಳನ ಹಾಳು ಬಾಳುವೆಗಿಂತ ದುಡ್ಡಿಲ್ಲದಂತಹ ಬೊಡ್ಡಿಯೆ ಲೇಸು ॥

ಪಂಚಾಯತೆಂಬುವ ನಾಡಿನ ನ್ಯಾಯವು ಬದಲಾಯಿತ್ತೈ ದುರ್ದೈವದಿಂದ । ಒಂದು । ಪಂಜೆಯುಳಿಯಲಿಲ್ಲ ನ್ಯಾಯದಿಂದ । ಬಂತು ಗಂಜಿಯ ಪಕ್ವಾನ್ನ ಜಗಳ –

ದಿಂದ । ಪಂಜಾಬದೊಳಗಾದ ಕೊಲೆಯನು ನೆನೆಯಿರಿ । ಜನರನು ಕೊಂದಿತು ನ್ಯಾಯ ಕೈಯಿಂದ ॥

ಬಿಸಿಲೊಳು ಕಾದಂಥ ಹುಡಿಯೊಳು ಹೊಟ್ಟೆಯ ಹೊಸೆದಂಥ ಜನರಿಗೆ ಕೊಟ್ಟ ನ್ಯಾಯ । ನಮ್ಮ । ಸೋಸುವ ಜನರಿಗೆ ಶಿಕ್ಕ ನ್ಯಾಯ । ರಕ್ತ ಬಸಿದಂಥ ಪಂಜಾಬೀ ಜನರ ನ್ಯಾಯ । ಹೊಸದು ಹೇಳುವದಿಲ್ಲ ನೆನೆಯಿರಿ ಪಂಜಾಬದೊಳಗಾದ ಕೊಲೆಯಂಥ ಘೋರ ಅನ್ಯಾಯ ॥

ಬಿಸಿಲನು ನೋಡದೆ ಪರದೆಯೊಳಿರುವಂಥ ಮಾನವಂತಿಯನ್ನು ಹಿಡಿದೆಳೆದು। ಅವರ ಬೀಸುವ ಬುರುಖೆಯ ಕದತೆಗೆದು। ಅವರ ಮಾಸಿದ ಮೋರೆಯ ತಿವಿತಿವಿದು। ಗಾಸಿಯಾಗಿರುವಂಥ ಹೆಣ್ಣುಮಕ್ಕಳ ಮೋರೆ। ಮೇಲುಗುಳಿದಂತಹ ಕ್ರೂರ ಅನ್ಯಾಯ॥

ಹೆಂಡವ ಕುಡಿದರೆ ಹೆಂಡತಿಯನು ಮಾರಿ ಭಂಡರಾಗುವಿರೆಂದು ನುಡಿದವರಿಗೆ। ಕಂಡ। ಕಂಡ ಕುಡುಕರ ಪಾದ ಹಿಡಿವರಿಗೆ। ಬಲು ಪುಂಡರ ಕಾಲನು ತೊಳೆವರಿಗೆ। ಮೊಂಡಾದ ನ್ಯಾಯವು ಕೊಟ್ಟೀತು ಜನರಿಗೆ ಬಂದಿಯ ವಾಸದ ಸವಿಯಾದ ಸುಖವ ॥

ಹಕ್ಕುಗಳೆಲ್ಲವು ಬಿಕ್ಕುತ ಮಡಿದವು ಸೊಕ್ಕಿತು ಅಧಿಕಾರ ಭೂಮಿಯಲಿ। ತಕ್ಕ। ಕಾಯಿದೆ ಹೋದವು ಧೂಳಿಯಲಿ। ನ್ಯಾಯ ಸಿಗುವಂಥ ಭೂಮಿಯ ಸ್ವರ್ಗದಲಿ। ಸೊಕ್ಕಿನ ಅಧಿಕಾರ ಸರ್ಪವು ತೊರೆದಿತು ನ್ಯಾಯವೆಂಬುವ ಠಕ್ಕಿನ ಪರೆಯ ॥

ತೂತುಳ್ಳ ಹಡಗವು ಮುಣುಗುತ್ತ ಮುಣುಗುತ್ತ ಕಡಲಿನ ತಳವನು ಕಾಣು ವಂತೆ। ಕಾದಿ। ಸೋತಂಥ ವೀರನು ಮಡಿಯುವಂತೆ ವಿಷ ವಾತದಿ ಪ್ರಾಣವು ಬಾಡುವಂತೆ। ಸೋತಂಥ ಭೂಮಿಯು ಪರದಾಸ್ಯ ಕದ ತನಿಗಚ್ಚಿ ನೊಳು ಬಿದ್ದು ಬೂದಿಯಂತಾಯ್ತು ॥

## ಹೆಂಡವು

ಹಳ್ಳಿಪಳ್ಳಿಗಳೊಳಗಿರುವಂಥ ಜನರಿಗೆ ಸುಖವನು ಕೊಡುವಂಥ ಸರಕಾರವು। ಪ್ರತಿ। ಹಳ್ಳಿಗೆ ಶಿಗಲೆಂದು ಶೆರೆಶಿಂದಿಯು। ಇಟ್ಟು। ತಲ್ಲಿಗಲ್ಲಿಗೆ ಹೆಂಡ ದಂಗಡಿಯ। ಸುಳ್ಳು ಹೇಳುವದಿಲ್ಲ ಕಣ್ಣಿಟ್ಟು ಕಂಡಂಥ ಕಥೆಯನು ಹೇಳುವೆ ಕೇಳಿರಿ ಜನರೇ ॥

ಶೆರೆಯನು ಕುಡಿಯುತ್ತ ಮರೆವರು ದೇಹವ ಸುರಿಯತ್ತ ಹಣವನು ಸರಕಾರಕ್ಕೆ। ಹಣ। ಸೇರುತ್ತ ಹೋಯಿತು ಪರದೇಶಕ್ಕೆ। ನಮ್ಮ। ಮೊರೆ ಕೇಳುವವರಾರು ಈ ಕಾಲಕ್ಕೆ। ಕ್ರೂರ ರಾಜ್ಯದ ಕರವು ಹಚ್ಚಿತು ರೈತರ ಕೂಳಿಲ್ಲದಂಥಹ ಒಡಲಿಗೆ ಕೊಳ್ಳಿ ॥

ಶಿಂದಿಯ ಕುಡಿಯುತ್ತ ಬತ್ತಲೆಯಾಗುತ್ತ ಶೆರೆಯನು ಮನದಣಿ ಕುಡಿ ಕುಡಿದು। ಬಂದು ಸಂದಿಯೊಳಗೆ ಸೂಳಿಮನೆಗಿಳಿದು। ಮನವ। ಕೊಂದು ನಾಚಿಕೆ ಯನ್ನು ಮನೆಗೆ ಬಂದು। ಮಂದ ಬುದ್ಧಿಗಳಯ್ಯೊ ಒಂದೊಂದು ದಿವಸಕ್ಕೆ ಒಂದೊಂದು ವ್ಯಸನವ ಕಲಿಯುತ್ತಲಿಹರು ॥

ಹೆಂಡವ ಕುಡಿಯುತ ಹಣವನು ಕಳಕೊಂಡು ಹೆಂಡತಿಯನು ಬಲು ಬಡಿಯು
ವರು । ತನಿ । ಗೆಂಡದ ಬಡತನ ಸೇರುವರು ತಮ್ಮ ಗಂಡಸುತನವನು
ಮಾರುವರು । ಹೆಂಡದ ದೆಶೆಯಿಂದ ಹೊಲ ಮನಿ ಕಳಕೊಂಡು ಹೆಂಡತಿ
ಯನು ಮಾರಿ ಷಂಡರಾಗಿಹರು ॥

ಈಚಲ ರಸದಿಂದ ನಾಚಿಕೆ ಮುಣುಗಿತು ಹೊಲ ಮನೆ ಹಣವೆಲ್ಲ ಹಾಳಾಯಿತು
। ಪನು । ಸೋಜಿಗ ಪ್ರಾಣವು ಬಲಗುಂದಿತು । ಬಲು ।
ಮೋಜಿನ ರಾಜ್ಯವು ಉಕ್ಕೇರಿತು । ಈಚಲ ರಸವೆಂಬ ಗಡಚಾದ ಜೀಕಳಿ
ಮನದಣಿ ಹೀರಿತು ಬಡವರ ರಕ್ತವ ॥

ಒಂದಲ್ಲ ಎರಡಲ್ಲ ಎಷ್ಟಂತ ಹೇಳಲಿ ಹಿಂದೀ ಜನರ ಬಲ ಮಂದಾಯಿತು ।
ರೈತ । ಮಂದಿಯ ಬಡತನ ಮುಂದಾಯಿತು । ಎಂದು । ಕುಂದದ
ವೀರ್ಯವು ಬಂದಾಯಿತು । ಕುಂದು ಕೊರತೆಗಳ ಸುರಿಮಳೆ ಸುರಿ
ಯಿತು ಎಷ್ಟೆಂತ ಹೇಳಲಿ ಬಡವರ ಗೋಳು ॥

ಬಿಳಿಯ ನ್ಯಾಯವು ಬೆಳ್ಳಗೆ ಆಯಿತು ಕರಿಯರ ನ್ಯಾಯವು ಕರಿದಾ
ಯಿತು । ಪನು । ತಿಳಿಯದ ಹೊಳೆಯದ ಬಾಳಾಯಿತು । ಮಳೆ । ಗಾಲದ
ಅಮಾವಾಸ್ಯೆಯಂತಾಯಿತು । ಹೊಳೆವ ಸ್ವಾತಂತ್ರ್ಯವು ಬಯಲಾಗಿ
ಹೋಯಿತು ಪರತಂತ್ರ ಕತ್ತಲೆ ಮುಸುಕಿತು ದೇಶ ॥

ಕಾರು ಕತ್ತಲೆಯಿಂದ ಕಪ್ಪಾದ ನಾಡೊಳು ರಾಮಮೋಹನರಾಯರೆಂಬುವರು
। ಬಲು । ಧೀರ ಮಹರ್ಷಿ ನವರೋಜಿಯವರು । ನಮ್ಮ ವೀರ
ಸುರೇಂದ್ರ ಬ್ಯಾನರ್ಜಿಯವರು । ಶೂರತನದ ಸುರಿಮಳೆಯನು ಸು
ರಿಸುತ್ತ ಸ್ವಾತಂತ್ರ್ಯ ದೇವಿಗೆ ದಾರಿ ತೋರಿದರು ॥

ಕಾರು ಕತ್ತಲೆಯನ್ನು ತರಿಯುತ್ತ ಬೆಳಗಿನ ಸಮಯಕ್ಕೆ ಸೂರ್ಯನು
ಜನಿಸುವಂತೆ । ಅತಿ । ಬಿಳರ ಜಾಳಿಗೆ ಕಡಿಯುವಂತೆ । ದುಷ್ಟ । ಹುಳುಗಳ
ಬಾಳನು ತಡೆಯುವಂತೆ । ಆಳುತನದ ಗೋಳು ಹಾಳುಮಾಡುತ
ಬಂದ ಬಾಳನೆಂಬುವ ಶೂರ ಸ್ವಾತಂತ್ರ್ಯ ತಿಲಕ॥

ಉರಿವಂಥ ಕಿರಣದ ಬೆಳಕನು ನೀಡುತ ಬಾಡಿ ಬಾಗಿರುವಂಥ ನಾಡೊಳಗೆ ।
ಬಲು।
ಸುರಿಯುತ್ತ ಜೀವದ ಮನದೊಳಗೆ । ಭರದೀ ಸುರಿದನು
ಧೈರ್ಯದ ಜನರೊಳಗೆ । ಕಾರುತ್ತ ವಿಷವನು ಏರುತ್ತ ಬರುವಂಥ
ಅಧಿಕಾರಿಗಳ ಸೊಕ್ಕು ಮುರಿದ ತಾನೆಲ್ಲ ॥

ಪರದಾಸ್ಯ ಪಾಶವ ಕಡಿಯುತ್ತ ಕಾದಲು ಶೂರತನದ ಶೆಳಕು ಹೊಡೆ
ಯಿತಲ್ಲ । ನಮ್ಮ । ಪರವಶರಾದಂಥ ಮನುಜರೆಲ್ಲ । ನಿದ್ದೆ । ಅರಿದೆದ್ದು
ಯುದ್ಧಕ್ಕೆ ನಿಂತರಲ್ಲ । ಆರು ವರುಷ ಕೈದು ಭೋಗಿಸಿ ಮಡಿದನು ಕಾ
ದಿದರೆಮ್ಮಯ ವೀರ ದಳವಾಯಿಯಲ್ಲಾ॥

ತಿಲಕರ ಪರಲೋಕದೊಳಗಿನ ಚರಣಕ್ಕೆ ಶಿರದಿಂದ ಬಾಗುತ ಮೋದದಿಂದ
। ಬಂದ । ಸುಲಲಿತ ಮೋಹನ ಚಂದದಿಂದ । ಮುದ್ದು । ಬೆಳಕನು
ಹರವುತ್ತ ಗಾಂಧಿ ಬಂದ । ಕಳೆಯಿಂದ ತುಂಬಿದ ಬೆಳದಿಂಗಳನು
ಸೂಸಿ ಸುರಿವಂಥ ಹುಣ್ಣಿಮೆ ಚಂದ್ರಮ ಬಂದ॥

ನಿಲ್ಲಿರಿ ನಿಲ್ಲಿರಿ ಬೆದರ ಬೇಡಿರಿ ಎದೆಗುಂದದೆ ನಿಲ್ಲಿರಿ ನಾಡೊಳಗೆ
। ಬಂದು । ಇಲ್ಲಿ ನಿಲ್ಲಿರಿ ನನ್ನ ರಣದೊಳಗೆ । ಇನ್ನು ಸಲ್ಲದ ಮಾ
ತೊಂದು ಬೇಡೆನಗೆ । ಗೊಲ್ಲರೆ, ಭಾಂಬರೆ ಬನ್ನಿರಿ ಎಲ್ಲರು
ಬನ್ನಿರಿ ನನ್ನ ರಣದೊಳಗೆ॥

ಜಾತಿಯ ಭೇದವ ಮರೆಯಿರಿ ಬೇಗನೆ ನೀತಿಯೊಂದೇ ಎಲ್ಲ ಮನುಜ
ರಿಗೆ । ಸಾಕು । ಜಾತಿಯ ಭೇದವು ಕೀಳರಿಗೆ । ಒಂದೇ ।ಮತವೆಲ್ಲ
ಬಳಲುವ ಬಡವರಿಗೆ । ಶಾಪವ ನಿತ್ತರೆ ತಾಪದ ರಾಜ್ಯವು ಮಣ್ಣುಗೂ
ಡುವದೆಂದು ತಿಳಿದಿರಿ ಮರುಳರೆ ॥

ಸ್ವಾತಂತ್ರ್ಯವೆಂದರೆ ರೈತರ ರಾಜ್ಯವು ರೈತರ ಹಿತವೊಂದೇ ಹಿತ ನಮಗೆ
। ಬಡ । ರೈತರ ಸುಖವೊಂದೆ ಸುಖ ನಮಗೆ । ಬಡ । ರೈತರ ಶ್ರಮವೆಲ್ಲ
ಶ್ರಮ ನಮಗೆ । ರೈತರ ರಕ್ತದ ಬಲವೆಲ್ಲ ಕುಂದಿತು ಪರದಾಸ್ಯ ರೋಗದ ಕಡು
ದುಃಖದೊಳಗೆ॥

ಜಗಕೆಲ್ಲ ಅನ್ನವ ಕೊಡುವಂಥ ರೈತರ ಬಾಗಿರಿ ಚರಣ ಕಮಲಗಳಿಗೆ
। ಅವರ । ರೋಗದ ಮೂಲವ ಕಿವಿಯೊಳಗೆ । ಬಲು । ಸೊಗದಿಂದ
ಪೇಳುವೆ ನಾ ನಿಮಗೆ । ಬಗೆ ಬಗೆ ರೋಗದ ಬೀಜವು ಬಂದಿದೆ ಬಗೆ ಬಗೆ
ಬಣ್ಣದ ಪರದೇಶದರಿವೆ॥

ಪರದೇಶಿ ಗಿರಣಿಯ ನಯವಾದ ವಸ್ತ್ರವು ರೈತರ ಕೊರಳಿಗೆ ಉರಲಾಯಿತು
। ನಮ್ಮ । ಸರಸಾದ ರಾಟಿಯು ಬಯಲಾಯಿತು । ಬಲು । ಬರೆಗು
ಮಾಡುವ ಮಗ್ಗ ಮುಗ್ಗಾಯಿತು । ಕೊರಳಿಗೆ ಕುತ್ತಾದ ಕರಳಿನ
ಗಾಯವು ಮಾಯಬೇಕೆಂದರೆ ಖಾದಿಯೆ ಹಾದಿ॥

ತರತರಬಣ್ಣದ ಹೊಳೆವಂಥ ಸರಸಾದ ಮಲಮಲಗಳನ್ನೆಲ್ಲ ತುಳಿ ತುಳಿದು
। ಭರ । ಜರತಾರಿ ಉಡುಪನು ಶೆಳೆಶೆಳೆದು । ಎಲ್ಲ । ಪರದೇಶಿ ಸಾಮಾನು
ಹಿಡಿದೆಳೆದು । ಭರದಿಂದ ಉರಿವಂಥ ತನಿತನಿ ಬೆಂಕಿಯ ಹಚ್ಚುವ ಕಿಚ್ಚಿನ
ರೊಚ್ಚಿನಲಿಡಿರಿ॥

ಖಾದಿಯೇ ತಳಹದಿ ಖಾದಿಯೇ ಗೋಡೆಯು ಖಾದಿಯ ಉಡಿಗೆಯು
ಬಡಜನರ । ಖಾದಿ । ಹಾದಿಯು ಅನ್ನಕೆ ಹೆಂಗಸರ । ನಮ್ಮ । ಖಾದಿ
ಯ ಹೊಟ್ಟೆಗೆ ನೂಲುದರ । ಖಾದಿಯೇ ಕಾಮಧೇನು ಪಿಂಜಾರ ಜನರಿಗೆ
ಖಾದಿಯೆ ಸ್ವಾತಂತ್ರ್ಯ ಗಳಿಸುವ ಹಾದಿ॥

ರಾಟಿಯ ತಿರುವಿರಿ ಕಾಟವ ಕಳಿಯಲು ರೈತರ ಹಸಿವನು ಹಿಂಗಿಸಲು
। ಕಷ್ಟ । ರಾಟಿಯೆ ಪರದಾಸ್ಯ ಕರಗಿಸಲು । ನಮ್ಮ । ರಾಟಿಯೆ
ಬಡತನವನೋಡಿಸಲು । ರಾಟಿಯ ಕಾಟವ ತಡೆಯದೆ ಮಡಿದರು
ಸೊಕ್ಕಿನ ಪರದೇಶಿ ವ್ಯಾಪಾರದವರು ॥

ರಣರಂಗದೊಳು ತಮ್ಮ ನೀರುಳ್ಳ ಖಡ್ಗವ ತಿರುವುತ ನೂರಾರು ಜನ
ಗಳನು । ಖಣ । ಖಣೆಸುವ ಬೆಡಗಿನ ಚಾಲೆಯನು । ಹಿಡಿದು । ಹಣೆಯುತ
ಕಾದುವ ವೈರಿಯನು। ರಣದೊಳು ಮಡಿವಂಥ ವೀರಗೆ
ಬಹಾದ್ದೂರನೆಂಬುವ ಹಿರಿದಾದ ಬಿರುದು॥

ಈ ರಾಜ್ಯದೊಳಗೆಲ್ಲ ವೀರರು ಹೋದರು ಹೊಸ ಹೊಸ ವೀರರು ಬರುತಿಹರು । ಬಲು । ಕ್ರೂರತನದಿ ಕಾರ್ಯ ನಡಿಸುವರು । ನಮ್ಮ ವೀರ್ಯದ ರಸವನು ಹೀರುವರು । ಶೂರತನದಿ ನಮ್ಮ ಬಡವರ ಕೊರಳ ನ್ನು ಕೊರೆಯುವ ಜನರು ಬಹದ್ದೂರರಾದರು ॥

ಬಹದ್ದೂರ ಮನುಜರೇ ಬೆಡಗಿನ ಪದಕವ ಬಿಟ್ಟುಬಿಡಿರಿ ನಾನು ಕೈ ಮುಗಿವೆ । ದೇಶ । ದ್ರೋಹವು ಸಾಕಿನ್ನು ಹೊಲೆ ಬಾಳುವೆ । ನಿಮ್ಮ । ಕುಹಕತನವ ನಾನು ಬಿಡಿರೆನ್ನುವೆ । ಮೋಹವ ತೊರೆಯುತ ರೈತರ ಹಿತವನು ಕಾದುತ್ತ ಪಡೆಯುವ ಯುದ್ಧಕ್ಕೆ ನಿಲ್ಲಿರಿ ॥

ಬಿಸಿ ಬಿಸಿ ರಕ್ತದ ತರುಣರೆ ಏಳಿರಿ ಬನ್ನಿರಿ ಸ್ವಾತಂತ್ರ್ಯ ರಣದೊಳಗೆ । ನಾನು । ಲೇಸಾಗಿ ಕಲಿಸುವೆ ಮನೆಯೊಳಗೆ । ನೀವು । ಕೂಸಾದಿ ರಯ್ಯಯ್ಯೋ ನಾಡೊಳಗೆ । ಬೆಸಿಗೆಯ ಮಾತಲ್ಲ ದೇಶದ ಇತಿಹಾಸ ಸೊಗಸಾಗಿ ಹೊಸೆಯುವ ವಿದ್ಯೆಯ ಕಲಿಸುವೆ ॥

ಹಳ್ಳಿ ಹಳ್ಳಿಗಳೊಳಗಿರುವಂಥ ರೈತರ ಮನೆಗಳು ನಿಮ್ಮಯ ಶಾಲೆಗಳು । ಎಲ್ಲ । ಹಳ್ಳಿಯ ಜನರೆಲ್ಲ ಗ್ರಂಥಗಳು । ಅವರ । ಪೊಳ್ಳಾದ ಹೊಟ್ಟೆಯು ಶಾಸ್ತ್ರಗಳು । ಸುಳ್ಳು ಹೇಳುವುದಿಲ್ಲ, ಮರುಳಾಗಬೇಡಿರಿ, ಶೆರೆಗಾರರಂಗಡಿ ಧರ್ಮದ ಮಠವು ॥

ಪರದೇಶಿ ಶಾಲೆಗೆ ಶರಣು ಹೊಡೆದು ಬನ್ನಿ ಲೇಸೆಮ್ಮ ಬೆಡಗನು ಮರೆಯುವದು। । ನಿಮ್ಮ । ಹೊರತಾಗಿ ದೇಶವು ಕರಗುವುದು । ಕೆಟ್ಟ । ನರಕದ ತಳವನು ಕಾಣು ವದು । ಶೂರತನದಿ ಬಂದು ಧೈರ್ಯದಿ ಕಾದಿರಿ ಸ್ವಾತಂತ್ರ್ಯದ ಯುದ್ಧದ ರಣರಂಗದೊಳಗೆ ॥

ರೈತರ ರಕ್ತವ ತಡೆಯಿಲ್ಲದೆ ಹೀರಿ ಗುದುಗರಾಗಿರುವಂಥ ಧನವಂತರೆ । ಧರ್ಮ । ನೀತಿಯ ತೊರೆವಂಥ ವಕೀಲರೇ । ಬನ್ನಿ । ಜಾತಿ ಭೇದವ ಬಿಟ್ಟು ಕುಲವಂತರೆ । ರೈತರ ಧನವನು ಹಿತಕ್ಕಲ್ಲ ರೈತರ ಸುರಿಸಿರಿ ಬಣಗಿನಬಿಂಕವ ತೊರೆದು ॥

ಕೈ ಕಾಲು ಹಿಡುಕೊಂಡು ವಿನಯದಿ ನಮಿಸಿರಿ ಹೆಂಡವ ಕುಡಿವಂಥ ಅನುಜರನು । ನನ್ನ । ವಕೀಲರೆ ಕೇಳಿರಿ ನುಡಿಗಳನು । ನಿಮ್ಮ । ಸಾಕಿನ್ನು ಬಡಿವಾರ ಸಾಗಿರಿನ್ನು । ನೇಕಾರ ಸಮಗಾರ ವಾಲಗದವರನ್ನು ಉಳಿಸಿರಿ ಹೆಂಡದ ಉರಿವಂಥ ಕೆಂಡದಿ ॥

ಹೋಲೆಯರ ಚರಣವ ಗಟ್ಟಿ ಹಿಡಿದುಕೊಂಡು ಹೇಳಿರಿ ಕರುಣದಿ ನುಡಿಗಳನು । ಬಲು । ತೊಳಲುವ ಮನುಜರ ಅಡಿಗಳನು । ಕ್ರೂರ । ಗಾಲಿಯೊಳಗೆ ಸಿಕ್ಕು ಮಡಿವರನು । ಕಾಲಿಗೆ ಬಾಗಿರಿ ಕರುಣವ ನೀಡಿರಿ, ಸರಸಾದ ನುಡಿಗಳ ಮಳೆ-ಯನು ಸುರಿಸಿರಿ ॥

ಹೊಡೆಯದೆ ಬಡೆಯದೆ ಜರಗಿದ ಕಾರ್ಯವು ನೂರಾರು ವರ್ಷೆಲ್ಲ ಬಾಳುವದು। ಹೊಸ । ಗಿಡದಂತೆ ಬಲವಾಗಿ ಬೆಳೆಯುವದು । ಸವಿ । ಗಿಡದಂತೆ ಸುಧೆಯನು ಸುರಿಯುವದು । ಹೊಡೆದರೆ ಹೋಯಿತು ಬಡೆದರೆ ಬಾಡಿತು ಜಡಿದರೆ ಜಾರಿತು ಸ್ವಾತಂತ್ರ್ಯ ಸಸಿಯು ॥

ಪಂಜಾಬದೊಳಗಾದ ಕೊಲೆಯನು ನೆನೆಸಿರಿ ತುರುಕರ ಅಪಮಾನ ಮನದೊಳಗೆ । ನೆನೆದು । ನಂಜೇರಿ ಹೋಗುವ ಮನದೊಳಗೆ । ಕಡಿ । ದಂಜಿಕೆಯನ್ನು ಒಂದು ಕ್ಷಣದೊಳಗೆ । ಪಂಜಾಬಿ ಜನರಂಥ ಧೈರ್ಯವ ಬಿತ್ತಿರಿ ಹಿಂದು ಮುಸಲ್ಮಾನರೆಲ್ಲ ರೊಂದಾಗಿ ॥

ಕಾವಿಲ್ಲದಂಥಹ ಕೊಡಲಿಯು ಗಿಡವನ್ನು ಕಡಿಯುವದೇನಯ್ಯ ಜಗದೊಳಗೆ । ನಮ್ಮ । ಸಾವೆಲ್ಲ ತಿಳಿಯಿರಿ ನುಡಿಯೊಳಗೆ । ಹುಚ್ಚು । ಭಾವ ಬಂದಿತು ನಮ್ಮ ನಾಡೊಳಗೆ । ಕಾವಿಲ್ಲದಿದ್ದರೆ ಬೆಣ್ಣೆಯು ಕರಗದು ಒಂದಾಗಿ ಹೋಗಿರಿ ಈ ಕಾಲದೊಳಗೆ ॥

ನ್ಯಾಯವಿಲ್ಲದ ಕೋರ್ಟು ನ್ಯಾಯವಿಲ್ಲದ ರಾಜ್ಯ, ನ್ಯಾಯವೆಲ್ಲಿಹುದಯ್ಯಾ ಬಡವರಿಗೆ । ಬಿದ್ದ । ಗಾಯವು ಪಂಜಾಬೀ ಕೊಲೆಯೊಳಗೆ । ಪೂರ್ಣ । ಮಾಯುವ ಹಾದಿಯು ಮನದೊಳಗೆ । ಸಾಯುವ ಸಮಯದ ಮರುವಿನೊಳಗು ಸಹ ಮರೆಯಬೇಡಿರಿ ನನ್ನ ದೇಶದ ಜನರೇ ॥

ಆರ್ಯರೇ ಕೇಳಿರಿ ಕಿವಿಗೊಟ್ಟು ನುಡಿಯನು ಇನ್ನೊಂದು ಸಲ ನಾನು ಹೇಳು ವೆನು । ನಿಮ್ಮ । ಕಾರ್ಯವ ಮಾಡಲು ಬೇಡುವೆನು । ನಮ್ಮ । ಆರ್ಯರ ಬಿರುದನ್ನು ನುಡಿಯುವೆನು । ಕಾರ್ಯವ ತೊರೆಯುತ್ತ ಹಿಂದಾಗಿ ನಡೆಯುವ ಮಂದ ಬಾಳುವೆಗಿಂತ ಮರಣವೇ ಲೇಸು ॥

ಸ್ಥಿರವಲ್ಲದಂಥಹ ಚಂಚಲ ತನುವನು ನೆರೆ ನಂಬಿ ಇರುವಂಥ ಬಾಳುವೆಯು । ಇದು ।
ತರವಲ್ಲ ಆತ್ಮವೆ ಸಾಧನವು । ದೇಹ । ನೆರೆನಂಬಿ ಇರುವದು ಬಡ ಮನವು । ಪರತಂತ್ರ, ನರಕದಿ ಹೊರಳುವ ಭೂಮಿಯು ಬಿಡಿಸಲು ಸವೆಸಿರಿ ಸುಕುಮಾರ ತನುವನು॥

ಒಣಗಿದ ಕುಸುಮವು ಹಿಂಡಿದ ಹಾಗೆಲ್ಲ ಪರಿಮಳವನು ಬಲು ಹರಡುವುದು । ಬಿಗಿದ । ವೀಣೆಯು ಸರಸಾಗಿ ನುಡಿಯುವುದು । ಕೊಂದ । ಪುನುಗೆಲ್ಲ ಗಮಗಮ ನಾರುವದು । ಗುಣವುಳ್ಳ ಚಂದನ ಬೆಂದರೆಯುರಿದರೆ ಕೊಡುವುದು ಜಗಕೆಲ್ಲ ಸರಸಾದ ಸುಖವ ॥



ಹಡೆದಂಥ ತಾಯಿಯ ಏಳು ಆತ್ಮದ ಸಾಲ ಮರುಳ ಜನರು ನೀವು ಮರೆ ತಿಹಿರಿ । ಯಾವ । ಒಡಲಿನ ಹಾಲನ್ನು ಕುಡಿದಿಹಿರಿ । ಯಾವ ನುಡಿಯಿಂದ ಹಗಲೆಲ್ಲ ನುಡಿಯುವಿರಿ । ಪೊಡವಿಯೊಳಗೆ ಯಶ ಬಡೆದಂಥ ತನಯರ ಪಡೆದಂಥ ಜನನಿಯ ಋಣವ ತೀರಿಸಿರಿ ॥

ಮದ್ದಿಲ್ಲ ಗುಂಡಿನ ಮಳೆಯಿಲ್ಲ ತೋಫಿನ ಸದ್ದಿಲ್ಲ ನೋಡಿರಿ ರಣದೊಳಗೆ । ಆತ್ಮ । ಶುದ್ಧಿಯೆ ಬಲವಾದ ಬಲ ನಮಗೆ । ಕ್ರೂರ । ಯುದ್ಧ ಬೇಕಿಲ್ಲ ಜಗದೊಳಗೆ ಕದ್ದು । ಹೇಳುವುದನ್ನು ಮರೆಯಿರಿ ಧೈರ್ಯದಿ ನುಡಿಯಿರಿ ಸ್ವಾತಂತ್ರ್ಯ ಯುದ್ಧವಿದೆಂದು ॥

ಸ್ವಾತಂತ್ರ್ಯ ವಿಷಯದ ಸೌಖ್ಯದಿಂದಲಿ ಸ್ವಾತಂತ್ರ್ಯದ ಪರ ಭಾಷೆ ಬಲಿಯಾಗಲಿ । ನಮಗೆ। ಸ್ವಾತಂತ್ರ್ಯವಿರಬೇಕು ನಾಡಿನಲಿ । ಎಲ್ಲ । ಸ್ವಾತಂತ್ರ್ಯ ಬೇಕೆಮ್ಮ ಆತ್ಮದಲಿ । ಸ್ವಾತಂತ್ರ್ಯದಿಂದಲೆ ಪರಮಾತ್ಮ ಪ್ರಾಪ್ತಿಯು ಟೊಂಕವ ಕಟ್ಟಿರಿ ಸ್ವಾತಂತ್ರ್ಯ ರಣದೊಳು ॥

ಹೀಗೆಂದು ಧೈರ್ಯದಿ ನುಡಿಯಲು ಗಾಂಧಿಯು ನೂರಾರು ಸಾವಿರ ಜನ ರೆಲ್ಲರು । ಮುಂದೆ । ಸಾಗುತ್ತ ಕಾರ್ಯವ ನಡೆಸಿದರು । ತಮ್ಮ । ಸೊಗಸಿನ ತನುಮನ ಸವಿಸಿದರು । ಬಾಗದೆ ನಡೆಯುತ್ತ ಪರದಾಸ್ಯ ಪಾಶವ ನಡೆದರು ಗಾಂಧಿಯ ಕಡು ಹಾದಿಯಿಂದ॥

ಬಂಗಾಲದೊಳಗಿಂದ ಪಂಜಾಬದೊಳಗಿಂದ ಹೊರಬಿದ್ದು ಬಂದರು ಬಲು ಜನರು । ಮತ್ತೆ । ಭಂಗವಿಲ್ಲದೆ ಮುಂದೆ ಸಾಗಿದರು । ಶಸ್ತ್ರ । ಸಂಗವಿಲ್ಲದೆ ನಿಂತು ಕಾದಿದರು । ಗಂಗಾಧರನೆಂಬ ಕರ್ನಾಟ ವೀರನು ಕಾದಿದ ಕರ್ನಾಟ ರಾಜ್ಯದೊಳೆಲ್ಲ ॥

ರೈತನ ಧನವನು ಹೀರುತ್ತ ಬಲವಾಗಿ ಧನವಂಥರಾದಂಥ ಬಲುಜನರು । ತಂದು । ರೈತರ ಕಾರ್ಯಕ್ಕೆ ಸುರವಿದರು । ಎಲ್ಲ । ರೈತರ ಹಣವನು ನೀಡಿದರು । ಮೋತಿಲಾಲರು ಚಿತ್ತರಂಜನದಾಸರು ಅಂಜದೆ ಯುದ್ಧಕ್ಕೆ ಬಂದು ಕೂಡಿದರೆ ॥

ಸ್ವಾತಂತ್ರ್ಯ ರಣದೊಳು ತನುವನು ಸವಿಸಿದ ಲಜಪತರಾಯರು ಮುಂದಾದರು
। ಕೀಚಲು । ಮೋಹನ ಅಜಮಲ್ಲ ಸಿದ್ಧಾದರು । ಪರ । ತಂತ್ರ್ಯದ ಕಡಿಯಲು ಹೆಣಗಿದರು । ಸ್ವಾತಂತ್ರ್ಯದೇವಿಯ ಹಸಿದಾದ ಹುಲಿಗಳು ಅಲ್ಲಿ ಬಂಧುಗಳೆಲ್ಲ ಬಂದು ಕೂಡಿದರು ॥

ಕರ್ನಾಟಕ ಸೀಮೆಯ ಶೂರವೀರರು ಕೂಡಿ ಗಾಂಧಿಯವರ ಮುಂದೆ
ಒಂದಾದರು

। ನಮ್ಮ । ಕರ್ನಾಟ ಸೂರ್ಯ ಗಂಗಾಧರರು । ಜಯ ಕರ್ನಾಟವೆಂದೆಂದು ಕಾದಿದರು । ಕರ್ನಾಟ ನಾಡೆಂಬ ಅಭಿಮನ್ಯು ನಿದ್ದೆಯ ಅರಿದೆದ್ದು ನಿಂತನು ಸ್ವಾತಂತ್ರ್ಯ ರಣದೊಳು ॥

ಶೆರೆಶೀಂದಿ ಕುಡಿತವು ಬಂದಾಗಿ ಹೋಯಿತು ಶೆರೆಶೀಂದಿಯಂಗಡಿ ಬಂದಾದವು । ಸರಸ । ಪರದೇಶಿಯಂಗಡಿ ಬರಿದಾದವು । ನಮ್ಮ । ಕುರುಡರ ಕಣ್ಣೆಲ್ಲ ಬೆರಗಾದವು । ಹಿರಿದಾದ ಪರದೇಶಿ ಅರಿವೆಯ ಕಾಮನಹೋಳಿಯ ಬೆಳಕನು ಹರವಿತ್ತು ಮುಗಿಲೊಳು ॥

ಸೊಗಸಾದ ಚಂದ್ರನ ಬೆಳ್ಳ ಬೆಳದಿಂಗಳ ತೆರೆಗಳು ಬೆಳಕನು ಚಂದದಿಂದ । ಬಗೆ । ಬಗೆಯಿಂದ ಹರವುವ ಹಾದಿಯಿಂದ । ಬಲು । ಸೊಗಸಿನ ಖಾದಿಯು ಅಂದ ದಿಂದ । ನಗೆಮೊಗದರಸನ ಬಲದಿಂದ ಬಂದಿತು ಪ್ರತಿಯೊಂದು ಮನೆಯೊಳೇ ತನ್ನ ಕೈಯಿಂದ ॥

ಹೆಣ್ಣುಮಕ್ಕಳು ತಮ್ಮ ಝುಣಝುಣ ಝುಣರೆಂದು ಧನಿಯನು ಕೊಡು ವಂಥ ಕರದಿಂದಲಿ । ಬೆಳ್ಳ । ಬಣ್ಣದ ಹಂಜಿಯ ಹಿಡಿಯುತ್ತಲಿ । ಅಚ್ಚ । ಸುಣ್ಣದ ನೂಲನ್ನು ತೆಗೆಯುತಲಿ । ಬೆಣ್ಣೆಯಂತಹ ತಮ್ಮ ಕರದಿಂದ ಗರಗರ ತಿರುವುತ್ತ ದಣಿದರು ಕೈರಾಟೆಯನ್ನು ॥

ಜಯಗಾಂಧಿ ಜಯಗಾಂಧಿ ಜಯಗಾಂಧಿಯೆನ್ನುತ್ತ ಬೆಳಕನು ಸುರಿಸುತ್ತ ನಾಡೊಳಗೆ । ಏನು । ಭಯವಿಲ್ಲದಂತಹ ರಣದೊಳಗೆ ಬಂದು ಕೊಯಿದರು ಪರದಾಸ್ಯ ಕ್ಷಣದೊಳಗೆ । ಭಯವೆಂದರೇನೆಂದು ಕೇಳುವ ತರುಣರು ಹೊಕ್ಕರು ದಬ್ಬಾಳಿಕೆಯ ಕಿಚ್ಚಿನೊಳಗೆ ॥

ಸಿಕ್ಕಲ್ಲಿ ಹೊಡೆದರು ಸಿಕ್ಕಲ್ಲಿ ಹಿಡಿದರು ಸಿಕ್ಕಲ್ಲಿ ಬಡೆದರು ಅರಸಾಳರು । ಬಲು । ಸೊಕ್ಕಿನ ಬಲದಿಂದ ನಡೆಸಿದರು । ನಮ್ಮ ಕುಕ್ಕುತ ಬಲವನು ಸಾಗಿಸಿದರು । ಉಕ್ಕುತ ಬರುವಂಥ ದಬ್ಬಾಳಿಕೆಯ ನೋಡಿ ಬೆರಗಾದರು ನಮ್ಮ ಸ್ವಾತಂತ್ರ್ಯ ವೀರರು ॥

ಭರತಭೂಮಿಯ ಚೆಲ್ವ ತೊಡೆಯ ಮೇಲಾಡುವ ನೂರಾರು ಸ್ವಾತಂತ್ರ್ಯ ಸೈನಿಕರು । ಕಡು । ವೀರರಾಗಿರುವಂಥ ಬಾಂಧವರು । ನಮ್ಮ । ಶೂರತನದ ಲಜಪತರಾಯರು । ಶೂರ । ಹಿಂದು ಮುಸಲ್ಮಾನ ಬಾಂಧವರೆಲ್ಲ ಭಂಗವಿಲ್ಲದೆ ಸಾಗಿ ಬಂದಿ ಸೇರಿದರು ॥

ಬೆಳದಿಂಗಳ ಚೆಲ್ವ ಮಳೆಯನು ಕರೆಯುತ್ತ ಗಗನದಿ ಬರುವಂಥ ಚಂದ್ರನನು । ಬಲು । ಹೊಳೆಯುವ ತೇಜದ ಹಿರಿಯನನು । ಬಂದು । ಸೆಳೆದಿತು ವಿಷವು ಮಹಾತ್ಮನನು । ಬೆಳಗುವ ಚಂದ್ರನ ತೆರೆಪಿಡಿದಿತು ಬಂದು ಸರಕಾರವೆಂಬುವ ಹಿರಿದಾದ ರಾಹುವು ॥

ರಾಮಮೋಹನರಾಯ ಸರೋಜಿನಿ ತಿಲಕರು ಜನಮನ ಹೊಲವನು ಹರಗಿದರು

। ನಮ್ಮ । ಭೂಮಿಯ ಹದವನು ಮಾಡಿದರು । ಬಲು । ಕೋಮಲ ಬೀಜವ ಬಿತ್ತಿದರು । ಭೂಮಿಯ ಸ್ವಾತಂತ್ರ್ಯ ರತ್ನದ ಸಸಿಯನು ಬೆಳೆಸಿದರಲ್ಲವೆ ಸ್ವಾರ್ಥವ ಸುರಿಸಿ॥

ತಿಲಕರ ಮರಣದ ಬಿಸಿಲನು ತಾಳದೆ ಬಳಲುತ್ತ ಬಾಡುವ ಭೂಮಿಯಲಿ । ಮತ್ತೆ । ಬೆಳಕನು ಸುರಿಸುತ ಆತ್ಮದಲಿ । ಬಂದು । ಹೊಲಸನು ತೆಗೆಯಿಸಿ ಸೀಮೆಯಲಿ । ಬಲವಾದ ಮೋಹನ ಸ್ವಾತಂತ್ರ್ಯ ಸಸಿಯನು ಬೆಳೆಸಿದ ಬಿಸಿಬಿಸಿ ರಕ್ತವ ಹಣಿಸಿ॥

ಸ್ವಾರ್ಥವ ತುಳಿದೆದ್ದು ಸ್ವಾರ್ಥವ ತೊರೆಯುತ್ತ ಸ್ವಾರ್ಥದ ಬೇಡಿಯ ಕಡಿಕಡಿದು । ಪರ । ಮಾರ್ಥದ ತತ್ವದ ತಿಳಿತಿಳಿದು । ಜನ್ಮ । ಸಾರ್ಥಕ ಮಾಡಿರಿ ಸ್ವಾರ್ಥತ್ಯಾಗದ ಸರಸಾದ ರಸದಿಂದ ಗಿಡವಾಗಿ ಬೆಳೆವದು ಸ್ವಾತಂತ್ರ್ಯ ಸಸಿಯು ॥

ಹಡೆದಂಥ ತಾಯಿಯ ಕೋಮಲ ಕೊರಳೊಳು ಕರುಣವಿಲ್ಲದೆ ಖಡ್ಗ
ಹೊಡೆಬಹುದು

। ಅದೆ । ಹಡೆದಂಥ ಹಸುವನು ಕಡೆಬಹುದು । ತಮ್ಮ । ಒಡಲನು ಕರಕರ ಕೊರೆ ಬಹುದು । ಹೇಡಿಯಾಗಿರುವಂಥ ಪರತಂತ್ರ್ಯನ ರಕ್ತದ ಕುಂಡದೊಳೆಂದೆಂದು ಜನ್ಮವು ಬೇಡಾ ॥

ಭಗ ಭಗ ಉರಿವಂಥ ಕೆಂಡದ ಕಿಚ್ಚಿನ ಶಯ್ಯಾದಿ ಸುಖದಿಂದ ಮಲಗುವದು । ಬಗೆ । ಬಗೆಯಿಂದ ಮರಣವ ಹೊಂದುವದು । ವಿಷದ । ಹೊಗೆಯಿಂದ ಮೂಗಿನಲೇ ತುಂಬುವದು । ಸೊಗಸಾದ ಕೊಂಡದ ಕೊಡವನು ಕುಡಿಯುವ ಜನ್ಮವಿದ್ದರೆ ಬೇಕು ಪರದಾಸ್ಯ ಬೇಡಾ ॥

ಏಳಿರಿ ಬಿಸಿ ಬಿಸಿ ರಕ್ತದ ತರುಣರೆ ಇಳಿಯಿರಿ ಸ್ವಾತಂತ್ರ್ಯ ರಣದೊಳಗೆ । ನಮಗೆ । ಹೊಳೆಯುವ ಸಹನವೆ ಸುಖ ನಮಗೆ । ನಮ್ಮ ಬೆಳೆಯುವ ಆತ್ಮವೆ ಬಲ ನಮಗೆ ಹೊಳೆಯುವ ಅಸಹದ ಸರಸಾದ ಶಸ್ತ್ರವ ಹಿಡಿಯಿರಿ ಕರದೊಳು ಕಡು ಧೈರ್ಯದಿಂದ॥
ಯುದ್ಧದ ಮಾತಿಲ್ಲ ಬಡಿಯುವ ಮಾತಿಲ್ಲ ಕಡೆಯುವ ಮಾತಿಲ್ಲ ರಣ ದೊಳಗೆ । ಆತ್ಮ । ಶುದ್ಧಿಯ ಸ್ವಾತಂತ್ರ್ಯ ಸುಖ ನಮಗೆ । ನಮ್ಮ । ಬುದ್ಧಿಯ ಹಿರಿದಾದ ಬಲ ನಮಗೆ ಶುದ್ಧಿಯ ಮನದಿಂದ ಬುದ್ಧಿಯ ಬಲದಿಂದ ಬಿಡಿಸಿರಿ ಬುದ್ಧನ ಬಂಧನದಿಂದ ॥

ತತ್ತಿಯೊಳಿರುವಂಥ ತಿಳಿಯಾದ ರಸವೆಲ್ಲ ದಿನದಿನ ಬಲಿಯುತ್ತ ನಡೆಯುವದು । ತನ್ನ । ಹೊತ್ತಿಗೆ ಬಲುವಾಗಿ ಬೆಳೆಯುವದು । ಒಮ್ಮೆ । ಕುತ್ತದ ಕವಚವ ಕಡೆ ಯುವದು । ಕುತ್ತನು ಕಳೆಯಲು ಹಕ್ಕಿಯ ಹಾದಿಯು ನೆನೆಯಿರಿ ಜಾನಕಿ ತನಯನ ವಚನವ ॥

॥ಮಾತರಂ ವಂದೇ ಮಾತರಂ॥

**ಲೇಖಕರು : 'ಸೀತಾತನಯ'**

ಈ ಕಾವ್ಯನಾಮಾಂಕಿತರು ಶ್ರೀಧರ ಖಾನೋಲ್ಕರ್ (ಗೋಕರ್ಣ ಸ್ಟಡಿ ಸರ್ಕಲ್‌ನಲ್ಲಿದ್ದ ಮುದ್ರಿತ ಪ್ರತಿ;ಶ್ರೀ ಸುರೇಂದ್ರ ದಾನಿಯವರು ದೊರಕಿಸಿದ್ದು)

# ೧೫. ಬಹುರೂಪಿ

ಇವರು ಯಾರು–ಎಂದು ಗಾಂಧಿಯವರ ಕುರಿತು ಬಗೆವರೆ।
ಅವರು ಒಬ್ಬರಲ್ಲಿ ಹಲವು ರೂಪಿನವರು ಕಾಣರೆ ?॥

ರಾಟಿ ಕಾಮಧೇನುವಿರುವ ತಪಸಿವರ ವಸಿಷ್ಠನು।
ಕೋಟಿ ವಿಘ್ನಗಳಲ್ಲಿ ಸತ್ಯಬಿಡದ ಹರಿಶ್ಚಂದ್ರನು॥

ವೀರ ತಪಸಿನಿಂದ ದಿವ್ಯ ಸೃಷ್ಟಿಗೈದ ವಿಶ್ವಾಮಿತ್ರನು।
ಘೋರ ಹಿಂಸೆ ಕರುಣೆಯಿಂದ ಮುರಿಯನಿಂತ ಬುದ್ಧನು॥

ದನುಜ ಬಲವ ದೈವಶಕ್ತಿಯಿಂದ ಗೆಲುವ ಕೃಷ್ಣನು।
ಮನುಜಕುಲವ ಪ್ರೇಮದಿಂದ ನಿಲಿಸಿ ನಿಂತ ಕ್ರಿಸ್ತನು॥

ತಂದೆಯಾಜ್ಞೆಯಂತೆ ಮನಸಿನೊಲವ ತೊರೆದ ರಾಮನು।
ಒಂದೆ ಹೊಣ್ಕೆಯಿಟ್ಟುಕೊಂಡು ನಡೆದು ತೋರ್ದ ಭೀಷ್ಮನು॥

ದಿವ್ಯ ನೆರವಿನಿಂದ ಗುರಿಯಹೊಡೆದ ಇಂದ್ರತನುಜನು।
ಭವ್ಯಕರ್ಮಯೋಗನಿರತ ದಿವ್ಯತೇಜ ಸೂರ್ಯನು॥

ಮರಣ ಹಿಂಸೆಯಲ್ಲು ಭಕ್ತಿಬಿಡದ ಪ್ರಹ್ಲಾದನು।
ಪರಮಸೇವೆಗಸ್ತಿಬಿಡುವ ಆ ದಧೀಚಿವರ್ಯನು॥

ಬಳಗದಲ್ಲಿ ದೈವರೂಪ ಕಂಡ ವರಗೃಹಸ್ಥನು।
ಹೊಲೆಯರ ಹರಿಯಜನರಗೈದ ಪುಣ್ಯದಂಶನು॥

ಬಗೆದರಷ್ಟು ಭಾವ ಬೆಳಗುವ ಮಹಾತ್ಮನು।
ಜಗದಜನ್ಮ ಸುಟ್ಟು ಜೀವನಾದ್ವಿಜಾತ್ಮನು॥

ಲೇಖಕರು : ಸಿಂಪಿ ಲಿಂಗಣ್ಣ (**1-8-1942**)
(ಅವರೇ ಒದಗಿಸಿದ್ದು – ಹಸ್ತಪ್ರತಿ)

# ೧೬. ಶರಣು ಮೋಹನದಾಸಗೆ

ಶರಣು ಮೋಹನದಾಸಗೆ । ಶರಣು ।
ಶರಣು ಮೋಹನದಾಸಗೆ ॥ ಪಲ್ಲವಿ ॥

ಶರಣು ಕರುಣವ ಸುರಿವ ತರುಣಗೆ ।
ಶರಣು ಭಾರತ ತನಯಗೇ ॥ಅನುಪಲ್ಲವಿ॥

ಕಾಮವನು ಕಡಿಕಡಿದು ಕ್ರೋಧದ
ಧಾಮವನು ಸದೆಬಡಿದು ತಪದಿಂ
ಸೋಮರಸವನು ಕುಡಿದು ನಿಂತಿಹ
ರಾಮರಾಜ್ಯದ ವೀರಗೇ ॥

ಧರ್ಮವೇ ತಳಹದಿಯು ಕರ್ಮಕೆ
ಕರ್ಮವೇ ತಳಹದಿಯು ಧರ್ಮಕೆ
ಧರ್ಮದಿಂದಲೆ ಪಾರತಂತ್ರ್ಯದ
ಮರ್ಮ ಹಿಂಗುವುದೆಂಬ ವೀರಗೆ ॥

ಲೇಖಕರು : ಶ್ರೀಧರ ಖಾನೋಲ್ಕರ್
(ಸಂಗ್ರಹ : ಸಿಂಪಿ ಲಿಂಗಣ್ಣ)

# ೧೭. ಖಾದಿಯ ಹಾಡು

ಧಾಟಿ : "ಕಡು ಧೀರನೆ ಶೂರನೆ" ಎಂಬಂತೆ

ಪರದೇಶದ ಬಟ್ಟೆಯ ಬಿಡು ಬಿಡು ।
ಸುಡು ಸುಡು ॥ ದೇಶಬಂಧು

ಸ್ವರ್ಣಧರಣಿಯಾ ಸ್ವರ್ಣವನೆಲ್ಲವ ।
ಪೂರ್ಣ ವಿದೇಶಿ ವಸ್ತ್ರಕೆ ಕೊಡುವ ।
ಕರ್ಣಕಠೋರವಿಚಾರವ ಸುಡು ಸುಡು ॥೧॥

ಪರದೇಶಿಗಳಾವಾಸಕ್ಕೀಯುವ।
ಭರತಖಂಡದ ಜೀವನಧನವ।
ಪರಮಸ್ವದೇಶೀ ಖಾದಿಗೆ ಕೊಡು ಕೊಡು ॥೨॥

ಸಾವಿರಗಟ್ಟಲೆಯಲಿ ಭಾರತದಲಿ।
ಸಾವರು ಕೂಳಿಲ್ಲದೆ ಹಸಿವಿಂದಲಿ।
ಜೀವನಮಾರ್ಗದ ಬಟ್ಟೆಯ ಕೊಡು ಕೊಡು ॥೩॥

ಮಾನಿನಿಯರು ಹಲವರು ಬತ್ತಲೆಯಲಿ।
ಕಾನನದೊಳಗಿರುವರು ಹಲವೆಡೆಯಲಿ।
ಮಾನದ ಹಾದಿಯ ಖಾದಿಯ ಕೊಡು ಕೊಡು ॥೪॥

ಚರಕವ ತಿರುಗಿಸಿ, ಬಟ್ಟೆಯನೊದಗಿಸಿ।
ಪರದೇಶೀ ವ್ಯಾಪಾರವ ನಿಲ್ಲಿಸಿ॥
ಧರೆಗೆ ಸ್ವರಾಜ್ಯದ ಬಟ್ಟೆಯ ಕೊಡು ಕೊಡು॥೫॥

ಭಾರತ ಸ್ವಾತಂತ್ರ್ಯಾಂಬರ ಮಿತ್ರನು।
ಧೀರ ಮಹಾತ್ಮನು ಸಾರುವ ನುಡಿಯನು।
ದೂರದೆ ಮನ್ನಿಸಿ ಖಾದಿಯ ತೊಡು ತೊಡು॥೬॥

ಲೇಖಕರು : ಪುಂಡೂರು ಲಕ್ಷ್ಮೀನಾರಾಯಣ ಪುಣಿಂಚತ್ತಾಯ

('ಸ್ವರಾಜ್ಯಗೀತಾಮೃತ', ಕಾಸರಗೋಡು, 1947)

('ರಾಷ್ಟ್ರ ಬಂಧು', 13-4-1931; 'ನವಯುಗ', 16-4-1931; ಮತ್ತು 'ತಾಯಿನಾಡು' 20-4-1931ರ ಪತ್ರಿಕೆಗಳಲ್ಲಿ ಪ್ರಕಟವಾಗಿದೆ)

# ೧೮. ಏಕೆ ಧರಿಸುವೆ ಸಾಕು ಬಿಡು ಪರದೇಶಿ ಜನರಾ ವಸ್ತ್ರವಾ

("ಮೇರಾ ಮೌಲಾ ಬುಲಾ" ಎಂಬಂತೆ)

ಮಾತೆ ಭಾರತಿಯ ಸ್ವತಂತ್ರ ಮಂತ್ರ ವಂದೇಮಾತರಂ।
ಘಾತುಕೀ ವಿದೇಶಿ ಜನರಿಗೆ ದಾಸರಾಗಿರೆ ಸತತಂ॥

ಏಕೆ ಧರಿಸುವೆ ಸಾಕು ಬಿಡು ಪರದೇಶಿ ಜನರಾ ವಸ್ತ್ರವಾ।
ಹಾಕುಬೆಂಕಿಲಿ ಉರಿಲಿ ಧಗಧಗ ಧರಿಸು ಖಾದಿ ಪವಿತ್ರವಾ॥

ಮಾತಾ ದೇಶಹಿತಾ ಘನಸೇವನವು।
ಸಖನೆ ತಕಲಿ ತಿರುವ್ರೊ ಪಡೆಯೊ ನೀ ಸುಖವಾ
ಭಗಿನಿ ಚರಕವಿದು ಪರಮಪಾವನವು॥

ಹೂಡಿ ಕೂಡಿ ಸ್ವತಂತ್ರ ಸ್ವರಾಜ್ಯವನು
ಬಿಡದೆ ದೇಶದ ಸೇವೆ ನಡೆಯಿಸಿ ಪಡೆಯು
ಒಡೆಯ ಶೇಷಾದ್ರೀಶ ಪ್ರೊರೆವನು ಕಡೆಗೂ॥

**ಲೇಖಕರು : ತಿಳಿಯದು**

(ಅತ್ಯಂತ ಜನಪ್ರಿಯವಾದ ಈ ಹಾಡಿನ ಮುದ್ರಿತ ಪಾಠ ದೊರೆಯಲಿಲ್ಲ. ಭಾಗಭಾಗವಾಗಿ ಸಂಗ್ರಹಕ್ಕೆ ನೆರವಾದವರು : ಕೆ. ರಮೇಶ್ ಕಾಮತ್, ಮಲ್ಪೆ, ಪಿ. ದಾಮೋದರಯ್ಯ, ಬಿ. ಸುಬ್ರಾಯ ಮಲ್ಯ)

# ೧೯. ಪವಿತ್ರ ಖಾದಿ

ಮೂಲ ಮಾತ ನಿಮಗ ಕಾಲಬಿದ್ದ ಹೇಳತೀನಿ ಕೇಳಿಕೊಂಡ ನಡಿಬೇಕ್ರಿ
ಸರ್ವಜನಾ। ದೇಶದಭಿಮಾನಕ್ಕಾಗಿ ತ್ರಾಸ ಆದರು ಚಿಂತಿಯಿಲ್ಲ
ಮೀಸಲಿದ್ದ ಖಾದಿಯ ವಸ್ತ್ರವನಾ। ಧರಿಸಿರಿ ಯಿನ್ನಾ ॥ಪಲ್ಲವಿ॥

ಮೂವತ್ತೇಳು ಕೋಟಿ ಮಂದಿ ಇಂದ ಖಾದಿ ಧರಿಸಿದರೆ ಭರತಖಂಡ
ಆಗತತಿ ಸ್ವಾಧೀನಾ। ಗೋಳಾಡಿ ಇಂಗ್ಲಿಷರು ಹಾಳಾಗಿ ಹೋಗತಾರ
ಕೂಳಯಿಲ್ಲದ ಸಾಯತಾರ ಗಿರಣಿ ಜನಾ। ಇಲ್ಲ ಅನುಮಾನಾ ॥

ಗಿರಣಿ ಸಹಾಯದಿಂದ ನಿಮಗ ವರ್ಣಿಸಲಿಕ್ಕೆ ಬಾರದಂತ ಅರವಿ ನೆಯ್ಯ
ತಾರ ಇಂಗ್ಲಿಷ ಜನಾ। ಅಗ್ಗದಿಂದ ಅರವಿ ಮಾರಿ ಜಗ್ಗಿ ಹಣ
ಒಯ್ಯತಾರ ನುಗ್ಗಮಾಡಿ ಬಿಟ್ಟಾರಲ್ಲೊ ಹಿಂದೂಸ್ತಾನ। ಉಳಿಯ
ಲಿಲ್ಲಯೇನಾ ॥

ಅರಿವಿ ಮಾಡಿ ನಿಮ್ಮಿಂದ ಅರವತ್ತು ಕೋಟಿ ಒಯ್ಯುತಾರ ಅರುಗೆಟ್ಟು
ಕೂತಿರೆಪ್ಪ ಯಲ್ಲಾ ಜನಾ। ಜಂತ್ರಾ ತಿರಿವಿ ನೀವೆಲ್ಲಾರು ಸ್ವಂತ
ನೂಲನೂತರ ನಿಂತ ಹೊಯ್ಯಕೋತಾರ ಪರದೇಶಿ ಜನಾ। ಸಿಗುದಿಲ್ಲ ಅನ್ನಾ ॥

ನಾಚಿಕಿಲ್ಲದವರು ನೀವು ನಾಡಿಗೆ ದೊಡ್ಡವರಪ್ಪ ಹೇಸವಲ್ಲದ್ಯಾಕ ಹೇಳ್ರೋ
ನಿಮ್ಮ ಮನಾ। ದೇಶಭಿಮಾನ ಬಿಟ್ಟ ಖಾಸದ್ರೋಹಿಗಳ ಅರವಿ ಬ್ಯಾಸರಿಲ್ಲದ
ತೊಡತಿರಲ್ಲೊ ಎಲ್ಲಾ ಜನಾ। ಇಲ್ಲ ಸುಜ್ಞಾನಾ ॥

ಜ್ಞಾನದಿಂದ ನಿಮ್ಮಲ್ಲಿಯ ಹೀನ ಗುಣಾ ತೆಗೆದು ಹಾಕಿ ಮಾನವಂತ
ರಾಗಿ ಖಾದಿ ವಸ್ತ್ರವನಾ।ಶ್ರೇಷ್ಠ ಅಂತ ಧರಿಸಿದರ ಸಾಷ್ಟಾಂಗ
ಹಾಕತಿನ ಕೋಟ್ಯಾವಧಿ ರೈತರ ಉಪಜೀವನಾ। ಅಗತತಿರಣ್ಣಾ ॥

ರೈತರ ಹಿತಗೋಸ್ಕರ ಖಾದಿ ಪ್ರಚಾರ ಚಳವಳಿ ಮಾಡ್ಯಾರ ಕಾಂಗ್ರೇಸ
ಜನಾ। ಅವರು ಹೇಳಿದಂಗ ನೀವು ಕೇಳಿಕೊಂಡ ನಡಿರಿನ್ನಾ

ಬಡತನ ದಿಂದ ಬಳಲೂರ ರೈತ ಜನರ ಕಷ್ಟಸೋಸೊರ ಹೊಟ್ಟೆಗಿಲ್ಲ ಅನ್ನಾ
ಸರಕಾರದ ಜನರು ತೆರೆದ ನೋಡವಲ್ಲರ ಕಂಣಾ ॥

ಸತ್ಯಶಾಂತಿ ತತ್ವಬೋಧಿಸುವರ । ಹುಟ್ಟಿಬಂದರ । ತೊಟ್ಟು ಅವತಾರ ।
ಗಾಂಧಿ ಭಗವಾನಾ । ಅನ್ನಾ ಹಾಕಿ ರೈತರನ್ನ ಸಾಕಿಸಲವುತಾನ ಪೂರ್ಣಾ ।
ಅಜ್ಜ ಗಾಂಧಿ ಮಾತಿನಂತೆ ಸಜ್ಜಾಗಿ ನಡದರ ಲಗ್ಗ ಬಗ್ಗ ಬಡುತಾನಾ ದುಷ್ಟರನಾ ॥

ಒಂದೇ ಮನಸ್ಸಿನಿಂದ ಕೂತ ವಂದೇ ಮಾತರಂ ಅನ್ನುತ ಚಂದದಿಂದ ತಿರುವಿ
ರವ್ವಾ ಜಂತ್ರವನಾ । ಜಂತ್ರ ಅರವಿ ಉಟ್ಟ ತೊಟ್ಟ ದೇಶಿ ಹಸರ ಬಳಿ
ಯಿಟ್ಟ ಸ್ವಂತ ಹಿಂದು ದೇಶದ ಅಭಿಮಾನಾ । ಹಿಡಿರೆವ್ವಾಯಿನ್ನಾ ॥

ಒಂದುವರಿ ತಿಂಗಳ ನೀವು ಒಂದೇ ಮನಸ್ಸಿನಿಂದ ಕೂತು ಚೆಂದದಿಂದ ಅರಿ
ರವ್ವಾ ಹತ್ತಿಯನಾ । ಬೆಸಿಕಟ್ಟಿ ನೀವೆಲ್ಲರು ಕುಸಿಲಿಂದ ಕುತಕೊಂಡ ಕಸ
ರಿಲ್ಲದ ಹೊಡದ ಅರಳಿಯನಾ ।ಹಾಕರಿ ಹಂಜಿಯನಾ ॥

ಇಷ್ಟೆಲ್ಲ ಕೆಲಸಾ ನೀವು ಕಷ್ಟಪಟ್ಟ ಮಾಡಿದರ ಶ್ರೇಷ್ಠ ಆಗತತಿ ನಿಮ ಮನಿ
ತನಾ । ಸಾಲಾ ಹರದ ನೀವೆಲ್ಲಾರು ಹಾಲುಬಾನ ಉಣತೀರಿ ಕಾಲಿ
ಕುಂಡ್ರಬ್ಯಾಡಿರವ್ವಾ ಎಲ್ಲಾ ಜನಾ । ಸಿಗತತಿ ಹಣಾ ॥

ಹಣಯಿಲ್ಲದಕ್ಕ ನೀವು ಹೆಣದಂಗ ಕಾಣತೀರಿ ಕೊರಳಾನ ಭಂಗಾರ
ಸಾಮಾನ । ಒತ್ತಿ ಇಟ್ಟ ನೀವೆಲ್ಲರು ಕಟ್ಟತೀರಿ ಕರಿಮಣಿ । ನಷ್ಟಮಾಡಿ
ಬಿಟ್ಟಿರವ್ವಾ ಮನಿತನಾ । ಎಂತ ದಡ್ಡತನ ॥

ಶಾಂತಿಯಿಂದ ಶ್ಯಾಣ್ಯಾರಾಗಿ ಭ್ರಾಂತಿಬಿಟ್ಟ ಕೇಳಬೇಕ ಸತ್ಯವಂತ ಮಹಾ
ತ್ಮರ ವಚನವನಾ । ಭಂಗಾರೇನು ಕಡಿಮಿಯಿಲ್ಲ ಬಾಳ ದಿವಸ ಹೋಗುದಿಲ್ಲ
ಹೇಳಿದಂಗ ಕೇಳಿದರ ಎಲ್ಲಾ ಜನಾ । ಸಿಗತತಿ ಪುನಃ ॥

ಭಂಗಾರದಿಂದ ಶಿಂಗಾರ ಮೊದಲಿನವರ ಜಂತ್ರ ತಿರುವಿ ದಿನಾ
ಭಂಗಾರಗಳಿಸಿ ಮಾಡಿಸಿಕೊಂಡಿದ್ದರ ಸಾಮಾನಾ । ಕೊಡಿ ಅರವಿಲಂತ
ತೊಡತಿದ್ರ । ನೂಲ ತಗುತಿದ್ರ । ರೂಪಾಯಿ ಗಳಸತಿದ್ರ । ಮೊದ
ಲಿನ ಜನಾ । ಹಿಡಿರೆಂತ ಬಿರಾಡಕ್ಕ ತಗೆದು ಕೊಡತಿದ್ರ ಹಣಾ ।

ಈಗಿನವರು ಚೈನಿಮಾಡತಾರ। ಚೈತಲಿ ತೆಗಿತಾರ। ಯಂಣಿ ಹಚ್ಚಿ
ದಿನಾ। ಅಳಗಾಲ ಒಡದರೊ ಉಳಿಯಲಿಲ್ಲ ಉತ್ಪನ್ನ॥
ಚರಖಾ ತಿರುವಿ ನೀವೆಲ್ಲಾರು ದೊರಕಿಸಬೇಕ ಉತ್ಪನ್ನ। ತರಕ ಮಾಡಿ
ಬಿಡರೆವ್ವಾ ಚೈನಿ ಗುಣಾ॥

ಇಷ್ಟೆಲ್ಲ ಕೇಳಿ ನೀವು ನಿಷ್ಠಾದಿಂದ ನಡದರ ಶ್ರೇಷ್ಠವಾಗತತಿ ನಮ್ಮ ಹಿಂದು
ಸ್ತಾನ। ಯಾವದೇನು ಕಡಮಿಯಿಲ್ಲ ಎರಡನೇಯವರು ಬೇಕಾಗಿಲ್ಲ।
ಸಾವಲಂಬಿಯಾಗಿ ನಮ್ಮ ಯಲ್ಲ ಜನಾ। ದುಡಿಯಬೇಕ ದಿನಾ॥

ರಾಟಿಮೇಟಿ ಉದ್ಯೋಗ ನೀವು ರಾತ್ರಿ ಹಗಲಿ ನಡೆಸಿದರ
ಖಾತ್ರಿಯಿಂದ ಹೋಗತದ ಬಡತನ।
ಕಂಬಾರ ಬಡಿಗೇರ ಪಿಂಜಾರ ನೇಕಾರ ತಟಗಾರ
ಬಣಗಾರ ಉಪಜೀವನಾ। ಸಾಗತತಿ ದಿನಾ॥

ಖಾದಿಕೇಂದ್ರ ಗ್ರಾಮೋದ್ಯೋಗ ಚರಖಾಸಂಘ ಮೊದಲ ಮಾಡಿ ಎಷ್ಟೋ
ಸಂಘ ಮಾಡಿದಾರ ಸ್ಥಾಪನಾ। ಪ್ರೊಡವಿಯೊಳಗಿನ ಕೂಲಿಕಾರ ದೃಢದಿಂದ
ಇದರೊಳಗ ದುಡದರ ಪ್ರತಿದಿನಾ। ಸಿಗತತಿ ಹಣಾ॥

ಹನ್ನೊಂದು ಸಾವಿರದಾ ಐದನೂರ ಎಂಭತ್ತೊಂದ ಮಂದಿ ನೇಕಾರಜನಾ।
ಒಂದು ಲಕ್ಷನಾಲ್ವತ್ತೊಂಭತ್ತ ಸಾವಿರದಾ ಒಂದನೂರಾ ಇಪ್ಪತ್ತೊಂಭತ್ತ
ಜನಾ। ನೂಲತಾರ ದಿನಾ। ಹತ್ತುಲಕ್ಷ ಹತ್ತುಸಾವಿರದಾ ವಂಬಯ್ಯನೂರು
ತೊಂಭತ್ತೇಳ। ವರ್ಷ ಉಳಸತಾರ ಇಷ್ಟು ಹಣಾ। ಕೋಟಿ ಮಂದಿ
ನೂಲವರು ತೊಂಭತ್ತ ಲಕ್ಷ ನೆಯ್ಯುವರು ಬಿಟ್ಟು ಬಿಡದೆ ದುಡದರ
ಎಷ್ಟೋ ಹಣ। ಉಳುತತಿ ದಿನಾ॥

ಕಷ್ಟಪಟ್ಟ ನಿತ್ಯ ದುಡಿಬೇಕ। ಕೈಕೆಲಸ ಬೆಳಸುದಕ॥ ನೂಲ ತೆಗಿಬೇಕ
ಖಾದಿ। ನೇದ ದಿನಾ ಚರಖಾ ಸಂಘಕ್ಕೆ ಒದಕೊಡಬೇಕ ನೇಕಾರ ಜನಾ।

ಮೆಂಬರಾಗಬೇಕ। ಖಾದಿ ತೊಡಬೇಕ। ಬೆಂಬಲ ಕೊಡಬೇಕ।
ಕಾಂಗ್ರೆಸಕ ಪೂರ್ಣ। ಅಂದರ ಸ್ವರಾಜ್ಯ ಆಗತತಿ ಸ್ವಾಧೀನಾ॥

ಹಿಂಸಾ ಬಿಡಬೇಕ। ಸತ್ಯ ನುಡಿಬೇಕ। ಕೊಳ್ಳುದೆ ಬಿಡಬೇಕ ಪರದೇಶಿ
ಸಾಮಾನಾ। ಇದರಂತೆ ನಡೆದು ನೀವು ಗಳಿಸಬೇಕ ಉತ್ಪನ್ನಾ ॥

ಆ ದೋಷರಹಿತ ಗಾಂಧಿಯವರ ದಾಸನಾದ ಹುಲಕುಂದ ದೇಶಭಕ್ತ
ಭೀಮರಾಯರ ಕವನಾ

**ಲೇಖಕರು : ಹುಲಕುಂದ ಭೀಮಕವಿ**
('ರಾಷ್ಟ್ರೀಯ ಪದಗಳು' ಸಂಗ್ರಹದಿಂದ)



## ೨೦. ಭಾರತ ಬೋಧೆ

(ರಾಗ, ತಾಳ, ಮಟ್ಟು: "ರಾಷ್ಟ್ರೀಯದೇಳಿಗೆಗೆ ಮನವ ನೀನಿರಿಸು" ಎಂಬಂತೆ)

ಭಾರತೀಯರೆ ನಮ್ಮ ಭಾಗ್ಯ ಸಂಪತ್ತೂ।
ಸೂರೆ ಸುಲಿಗೆಯಾಗಿ ಹೋಗುತ್ತ ಬಂತೂ॥
ಘೋರ ನಿದ್ದೆಯ ಕಾಲವದು ಹಿಂದೆ ಸಂತೂ।
ಜೋರಿನಿಂದೇಳುವ ಹೊತ್ತೀಗ ಬಂತೂ ॥೧॥

ಬೆಳ್ಳಿಭಂಗಾರವಿದ್ದುದು ಬರಿದಾಯ್ತು।
ಟೊಳ್ಳು ಕಾಗದ ಎಲುಮಿನ ತುಂಬಿಹೋಯ್ತು॥
ಒಳ್ಳೊಳ್ಳೆ ನವರತ್ನಗಳು ಕಾಣದಾಯ್ತು।
ಕೊಳ್ಳೆಯಾದವು ಪರದೇಶಿಯರ್ಗಿಂತೂ ॥೨॥

ಮನೆಯೊಳ್ ಹಿಂದಿದ್ದ ಕಂಚಿನ ಬಟ್ಟಲಿಲ್ಲಾ।
ಗಣನೆಯಿಲ್ಲದ ತಾಂಬ್ರ ಪಾತ್ರೆ ಈಗಿಲ್ಲಾ॥
ಮಿನುಗುವ ಗಾಜು ಪಿಂಗಾಣೆಯೇ ಎಲ್ಲಾ।
ಜನರಿಗೂ ಚಿಮಿಣಿ ಬುರ್ಡೆಯೆ ಬೇಕಾಯ್ತಲ್ಲಾ ॥೩॥

ವೀರಭಾರತ ಭಾಗ್ಯನಿಧಿ ರಾಷ್ಟ್ರವೆನಿಸೀ।
ದಾರಿಕಾಯಲು ಬೇಕಾಯ್ತೀಗ ಪರದೇಶೀ॥
ದೂರದಿಂದಲ್ಲಿ ವಸ್ತ್ರದ ರಾಶಿರಾಶೀ।
ಹೇರುಗಳ್ ಬಂದು ಗೈದವು ನಮ್ಮ ಘಾಸೀ ॥೪॥

ಕೈಗಾರಿಕೆಯು ದೇಶದೊಳು ನಾಶವಾಯ್ತೂ।
ಮೈಗಾವಲಿಗು ಪರಜನರೇ ಬೇಕಾಯ್ತೂ॥
ಸೈಗುಟ್ಟಲಿಕೆ ನಾವು ಚೆನ್ನಾಗಿ ಕಲಿತೂ।
ಐಗಳಿಲ್ಲದ ಮಠದಂತಾಗಿ ಹೋಯ್ತೂ ॥೫॥

ಬೀಡಿ ಸಿಗ್ರೇಟ್ ಚುಟ್ಟಾ ನಮಗೀಗ ಬೇಕೂ ।
ಒಡ್ಯಾಟಕ್ಕಾಗಿ ಬಾಯ್ಕಲ್ಲಾಗ ಬೇಕೂ ॥
ಲೇಡಿ ರಿಸ್ಟ್‌ವೋಚ್ ಕೈಗೆಕಟ್ಟಿದರ್ಸಾಕೂ ।
ಬ್ರಾಂದಿ ಶರಾಬ್ ಸೇಂದಿ ಕುಡಿವ ಧಡಾಕೂ ॥೬॥

ತಲೆಗಿಡಲಿಕೆ ಬೇಕೇಬೇಕೊಂದು ಹ್ಯಾಟೂ ।
ಚಲುವಾಗಿ ಮೈಗಿರಬೇಕು ಲೋಂ–ಕೋಟು ॥
ಬಲವಾಗಿ ಕಾಲಿಗೆ ಕಟ್ಟಲು ಬೂಟೂ ॥
ಗೆಲವಾಗಿ ನಡೆ, ನುಡಿ, ದರ್ಬಾರು, ಥೇಟೂ ॥೭॥

ದೊರೆಯಾಗಿ ಮೆರೆಯುವಾತುರದ ತಮಾಸೇ ।
ಸರಿಯಾಗಿ ಫ್ರೆಂಚ್ ಕಟ್ಟು ಮಾಡಿದ ಮೀಸೆ ॥
ಬರೆಹುಲಿ ಮೈ ಬಣ್ಣಕ್ಕಾಶೆಯ ಸಿರಿಸೇ ।
ನರಿಯಣ್ಣ ಮೈಸುಟ್ಟು ಕೊಂಬುದು ಲೇಸೇ ॥೮॥

ಶರಧಿರಾಜನಿಗೂ ನಮಗೂ ನಂಟತನವೂ ।
ಸ್ಥಿರವನೆ ಉಪ್ಪಿಗೇಕಿಲ್ಲ ಬಡತನವೂ ॥
ಪುರಕ್ಷೀರ ನಿಧಿವಾಸ ಸ್ಥಾನವೇ ಘನವೂ ।
ಇರಲು ಮಜ್ಜಿಗೆಗೇಕೆ ನಾಸ್ತಿ ವಚನವೂ ॥೯॥

ಧರೆಯೊಳ್ ನಮ್ಮವರ ಪೂರ್ವಭಿಮಾನವೆಲ್ಲಿ ।
ತರಗತಿ ನಿರ್ಣೈಸಿಹರು ನೋಡಿರಲ್ಲಿ ॥
ಕರಿಜನ ನಾವೆಂದು ಬಿಳಿವರ್ಗದಲ್ಲಿ ।
ಬೆರೆತಿರಬಿಡರು ಪೂರ್ವಾಫ್ರೀಕದಲ್ಲಿ ॥೧೦॥

ಹಿಂದೂ ಮುಸಲ್ಮಾನ ಬಂಧುಗಳಿನ್ನೂ !
ಒಂದೇ ಮನದಿ ಫಾರ್ಸಿ ಕ್ರಿಸ್ತ್ಯಾದಿಯರನ್ನೂ ॥
ಪೊಂದಿಸುತ್ತೈಕ್ಯಮತ್ಯದೊಳ್ ಮುಂದಿನ್ನು ।
ಚಂದದೊಳಿರೆ ನಮಗಿದಿರಿಹರೇನು ॥೧೧॥

ಕುಡಿತತನವೆ ಸರ್ವ ಕೇಡಿನ ಮೂಲ ।
ಕುಡಿತತನವೆ ದ್ರವ್ಯ ನಿಧಿಯ ನಿರ್ಮೂಲ ॥
ಕುಡಿತತನವೆ ಪಿಶಾಚನ ಮೋಹಜಾಲಾ ।
ಕುಡಿತ ಬಿಡಲು ನಮಗಿದುವೇ ಸುಕಾಲಾ ॥೧೨॥

ಗುತ್ತೆ ಯೇಲಮ್ಮಿಗೆ ನಾವು ನಿಲ್ಲಬೇಕೆ ।
ನಿತ್ಯ ಬಡವರ ಗೋಳದು ನಮಗೇಕೆ ॥
ತೆತ್ತ ದುಡ್ಡಿನಗಂಟು ಹೋಯ್ತುತ್ತ ಜೋಕೇ ।
ಮತ್ತಿದ ತಿಳಿದರೂ ಬುದ್ಧಿಲ್ಲವೇಕೆ ॥೧೩॥

ಸ್ವದೇಹ ಪೋಷಣೆಯಾಯ್ತೆಮಗೆಲ್ಲ ।
ಸ್ವದೇಶಿಯಾಹಾರ ಹವೆ, ಬಿಸಿಲಲ್ಲಿ ॥
ಸ್ವದೇಶಮಾತೆ ಭಾರತಿಯುದರದಲೀ ।
ಸ್ವದೇಶಕ್ಕಾಗಿ ಹುಟ್ಟಿಹೆವು ನಾವಿಲ್ಲಿ ॥೧೪॥

ತಿಳಿದಿದ ದೇಶಸೇವೆಗೆ ಮನ ನೀಡಿ
ತಿಳಿದು ದೇಶೋದ್ಧಾರಕ್ಕಾಗಿ ಒಡಗೂಡೀ ॥
ಅಳಿದರೀ ದೇಹ ದೇಶದ ಮಣ್ಣೇ ನೋಡೀ ।
ತಿಳಿಸಿ ನೀವಿದ ದೇಶದ್ರೋಹಿಯೊಳ್ ಬೇಡೀ ॥೧೫॥

ದೇಶೀಯವಾದ ವಸ್ತ್ರಗಳನ್ನೆ ಧರಿಸೀ ।
ದೇಶೀಯ ಮಗ್ಗಕುತ್ತೇಜನ ಕೊಡಿಸೀ ॥
ದೇಶೀಯ ರಾಟಿಮೂಲಕ ನೂಲು ತೆಗಿಸೀ ।
ವಾಸಿಪ ಮನೆಯೊಳೆಲ್ಲರಿಗಿದ ಕಲಿಸೀ ॥೧೬॥

ಪರದೇಶದೊಡವೆಯ ಗೊಡವೆಯಂ ಬಿಡಿಸೀ ।
ಪರದೇಶಿಯರ ವೇಷ ಭಾಷೆ ಸಾಕೆನಿಸಿ ॥
ಪರರೊಳ್ ಮತ್ಸರ ಬೇಡಾ ನಂಬಿಕೆ ತ್ಯಜಿಸೀ ।
ಸ್ಥಿರದಿಂ ಸ್ವದೇಶೀಯ ವ್ರತವಿಂದೆ ಧರಿಸೀ ॥೧೭॥

ಗಾಂಧಿ ಮಹಾತ್ಮುಮ ನೆಹರು ಮುಂತಾದಾ।
ಮುಂದಾಳುಗಳು ತಿಳಿಸಿದ ಬುದ್ಧಿವಾದಾ॥
ಎಂದಿಗು ಮರೆಯದೆ ವರ್ತಿಸಿ ಸುಖದಾ।
ಮುಂದಿನ ಹಾದಿ ಸ್ವೀಕರಿಸಿರಾನಂದಾ ॥೧೮॥

ಇನ್ನಾದರು ಮನದೊಳ್ ಧೈರ್ಯತಾಳೀ।
ಬನ್ನಿ ಬಾಯ್‌ಬಡಿಕ ತನವ ಹಿಂದೆ ತಳ್ಳೀ॥
ಭಿನ್ನ ಭೇದವ ಕಲಿಸುವ ಬೆಂಕಿ ಕೊಳ್ಳಿ।
ಯನ್ನೀಗ ಉರಿಯದಂತೆ ನೋಡಿಕೊಳ್ಳಿ॥೧೯॥

ಏಳಿರೆದ್ದೇಳಿರಿನ್ನಾದರ್ಕಣ್ತೆರೆದೂ।
ಹಾಳಾದ ಜಾತಿ ವೈಷಮ್ಯಗಳ್ತೊರೆದೂ॥
ಪೇಳಿದ ರಘುರಾಮದಾಸ ತಾ ಕರೆದೂ।
ಬಾಳಿರ್ಸರ್ವೈಕ್ಯಮತ್ಯದೊಳಿನ್ನು ಮೆರೆದೂ ॥೨೦॥

ಲೇಖಕರು : ಪೆ.ರ.ಮ. (?)

(ಮುದ್ರಿತ ಪುಸ್ತಕದಿಂದ. ಲೇಖಕರು ದಕ್ಷಿಣ ಕನ್ನಡದವರು. ಯಾರೆಂದು ಖಚಿತವಾಗಿ ತಿಳಿಯದು; ರಘುರಾಮ ಎಂಬ ಮುದ್ರಿಕೆ ಇದೆ)

## ೨೧. ಲಾವಣಿ

ಜಪಿಸಿರಿ ಸ್ವರಾಜ್ಯ ಮಂತ್ರವನೂ । ಧರಿಸಿರಿ ಸ್ವದೇಶಿವಸ್ತ್ರವನೂ ॥ಪಲ್ಲವಿ॥

ಮೂರವತಾರದ ಮೂರ್ತಿಗಳಾಗಿಹ । ಧೀರರು ದೇಶದೊಳು ।
ಪುಟ್ಟಿದರೂ । ಧೀರರು ದೇಶದೊಳು ॥ ಪಾರತಂತ್ರ್ಯದೀ
ಸೂತ್ರವ ಹರಿಯುವ ನೀತಿಯ ಮಂತ್ರವಿದೂ ॥೧॥

ಜ್ಯೇಷ್ಠ ಪಿತಾಮಹ ದಾದಾಭಾಯಿಯರು । ಸೃಷ್ಟಿಸಿ ತೋರಿದರೂ ।
ಕಷ್ಟವ ಕಳೆಯುವ ಗುಟ್ಟು ಇದೆನ್ನುತ । ದೃಷ್ಟಿಗೆ ತೋರಿದರು ॥೨॥

ಸಫಲವಿದೆನ್ನುತ ಚಿಪ್ಳುಣಕಾರರು । ಗುಪಿತವ ತೋರಿದರು ।
ತಪಿಸುವದೀ ಕಾರ್ಯವ ನೀವೆಲ್ಲವ । ಸುಕೃತ ಗೈಯ್ಯುವದು ।
ಸ್ವರಾಜ್ಯಕೆ ಉಪಕೃತ ಗೈಯ್ಯುವದೂ ॥೩॥

ಬಾಲಗಂಗಾಧರ ತಿಲಕರು ಲೋಕಕೆ । ಮಾನ್ಯರು ತಾವೆನಿಸಿ ।
ಚಾಲನಗೈದರು ಮುಂದರಿಯಲು ಬಲು । ಕಪಡುಗಳನು ಸಹಿಸಿ ॥೪॥

ವೀರರು ನಮ್ಮ ವಿಚಾರಕೆ ತನುಮನ । ಸೂರೆಯಗೊಟ್ಟಿಹರೂ ।
ಕಾರಾಗೃಹ ವಾಸವನನುಭವಿಸುತ ತೋರಿದ ಮಾರ್ಗವಿದೂ ॥೫॥

ಲಾಲ ಲಜಪತರಾಯರು ತಿಳಿದರು । ಮೂಲ ಮಂತ್ರವೆನುತಾ ।
ಕಾಲಕೆ ಬಂದಿಹ ಕಷ್ಟವ ಸಹಿಸುತ ಮುಂದಕೆ ನಡೆಯುವರೂ ॥೬॥

ಪಾಲ ಚಂದ್ರರನುಗಾಲವು ಲೋಕಕೆ । ಮೇಲನು ತಿಳಿಸಿದರು ।
ಸ್ಥೂಲ ಸೂಕ್ಷ್ಮಗಳ ತಿಳಿಯುತ ನೋಡಿರಿ । ಕಾಲವ ಕಳೆಯದಿರಿ ॥೭॥

ಹಿಂದೆಮುಂದಿನವರಿಂದಕೆ ತಪ್ಪದೆ ಸಂಧಿಯನನುಸರಿಸೀ ।
ಮುಂದೆ ಮಹಾತ್ಮಾ ಗಾಂಧಿಯರೀಪರಿ । ಸಂದೇಶವ ತಿಳಿಸಿ ॥೮॥

ಪರಿಪರಿ ಕಷ್ಟವ ಸುರಿಸುರಿದನು ದಿನ । ತರಹರಿಸದೆ ಮನಕೆ ।
ಕರುಣಿಸಿ ಪೇಳ್ದರು ಸ್ವದೇಶಿ ಮಂತ್ರವ ಪರರಿಗರಿಯದಂತೇ॥೯॥

ನಿದ್ರೆಯೊಳಿರುವರ ಮುದ್ರೆಯನೀಕ್ಷಿಸಿ । ಬುದ್ಧಿಯೊಳೆಚ್ಚರಿಸಿ ।
ಸಿದ್ದನಗರ ಶ್ರೀ ದೇವನ ನೆನೆಯುಂತೆ । ಬುದ್ಧಿಯ ನೆರೆ ಕಲಿಸೀ ॥೧೦॥

**ಲೇಖಕರು : ತಿಪ್ಪಯ್ಯ ಮಾಸ್ತರ್**
('ರಾಷ್ಟ್ರೀಯ ಪದ್ಯಗಳು', 1930)

## ೨೨. ಹೊಡೆದೋಡಿಸು

(''ಯೆಡಕರಿ ತಯಾರ ವಾವಾ'' ಎಂಬಂತೆ )

ಹೊಡೆದೋಡಿಸಿಬಿಡಿರೀಗ । ಈಗ ।
ತಡಮಾಡದೆ ಸೆರೆಮಾರಿಯ ಬೇಗ ॥

ಲಕ್ಷಾವಧಿ ಬಡವರ ಸಂಸಾರವ ।
ಭಕ್ಷಿಸಿದೀ ರಾಕ್ಷಸನನ್ನೀಗ ॥

ತಾಮಸ ಮಾದಕ ಮಾರಿಯ ಬಿಡದೆ ।
ನೇಮದಿ ಜನರೆಲ್ಲರು ಬಂದೀಗ ॥

ದಾರಿದ್ರ್ಯವ ದಾವಾನಲ ಸಾಕು ।
ಸ್ವರಾಜ್ಯವ ಸಂಪಾದಿಸಲೀಗ ॥

ಹೆಂಡದ ಮಾರಿಯ ಗಾಂಜಾ ಪಿಶಾಚಿಯ ।
ಬ್ರಾಂಡಿಯ ಭೂತವನೋಡಿಸಿರೀಗ ॥

ಕೋಲು ಕಠಾರಿಗಳಿಂದಲಿ ಥಳಿಸಿ ।
ಕಾಲಿನಿಂದಲೊದ್ದೋಡಿಸಿರೀಗ ॥

ವಂಶದ ಮೂಲಕ ದೋಷದ ಭಾಂಡಕೆ ।
ಮೋಸಗೊಂಡುದಕೆ ಹೇಸುತಲೀಗ ॥

ಲೇಖಕರು : ತಿಳಿಯದು
('ಮದ್ಯನಿಷೇಧ ಪದ್ಯಾವಳಿ' ಶಿರಸಿ, 1939)

# ೨೩. ದುರ್ವ್ಯಸನಗಳನ್ನು ಬಿಡಿ

(''ಎನ್ನದು ಈ ಕನ್ನಡ ನಾಡು'' ಎಂಬಂತೆ)

ಕುಡಿಯಬೇಡಿ ಸೆರೆಸೇಂದಿಗಳ । ಬಿಡಿರಿ ಬಿಡಿರಿ ದುರ್ವ್ಯಸನಗಳ ॥ಪ॥
ಮಾಡುವೆ ನಿಮಗೆ ವಿನತಿಗಳನಾ । ಬೇಡುವೆ ಮುಗಿಯುತ ಕರಗಳನಾ ॥ಅ॥

ಸರಕಾರಕೆ ಕರರೂಪದಲಿ । ಪರಿಪರಿ ಲಾಭವ ಮಾಡುತಲಿ ।
ಪರದೇಶಕೆ ಹಣ ಹಾಕುತಲಿ । ದಾರಿದ್ರ್ಯವ ನಮಗೀಯುತಲಿ ॥
ಪರಸತ್ತೆಯ ಸ್ಥಿರಗೊಳಿಸುತಲಿ । ಪರದಾಸ್ಯದುರಿಯೊಳೊಗೆಯುತಲಿ।
ಸಿರಿಸಂಪದಗಳ ಸೆಳೆಯುತಲಿ । ದರವೇಶಿಗಳಿವರೆನಿಸುತಲಿ ॥
ಧರೆಯಲಿ ಸುಖ ಸಂಹರಿಸುವದು ।
ಅರಸನ ತಿರುಕನ ಮಾಡುವದು ॥
ನರಕದ ಯಾತನೆ ತೋರುವರು
ವರಣಿಸಲಾಗದು ಈ ಸೆರೆಯ । ಪರಿಪರಿಯಲಿ ಕೊಡುತಿಹ ವ್ಯಥೆಯ ॥೧॥

ಜ್ಞಾನಿಯ ಜ್ಞಾನವ ಕೆಡಿಸುವದು । ಬಲವಂತನ ಬಲವಳಿಸುವದು ॥
ಮಾನ ಮಾನ್ಯತೆ ಕಳೆಯುವದು । ಗುಣವಂತಹನ ಗುಣ ಹಿಂಗಿಸುವುದು ॥
ಮನುಜನ ಮಾನುಷತನವನ್ನೇ । ಕ್ಷಣದಲಿ ಮಾಯವ ಮಾಡುವದು ॥
ಮಾನಭಂಗವನು ಪೊಂದಿಸುತೆ । ಹೀನ ದೀನತೆಯ ತಂದಿಡುತೆ ॥
ಧರ್ಮಾಧರ್ಮ ವಿಚಾರವನು ।
ನೀತಿ-ಅನೀತಿ ವಿವೇಕವನು ।
ನಾಶ ಮಾಡುವದು ಬುದ್ಧಿಯನು ।
ಸಾಕು ಸಾಕು ಸೇಂದಿಯ ಸಂಗ । ಸಾಕು ಸಾಕು ಸಹಿಸಿದ ಭಂಗ॥೨॥

ಕುಡಿದಾಕ್ಷಣ ಹುರಿದುಂಬಿಪುದು । ಕಡೆಗತಿ ನಿತ್ರಾಣವು ನಿಜವು ॥
ನಾಲಿಗೆಗಿದು ರುಚಿಕರ ರಸವು । ಆರೋಗ್ಯಕೆ ನಾಶಕ ವಿಷವು ॥
ಕಣ್ಣಿಗೆ ನುಣ್ಣಗೆ ಕಾಣುವದು । ಗುಣದಲ್ಲಿ ಘಾತಕವಾಗಿಹುದು ॥

ಹೊರಗಡೆ ಹೊಂಬಣ್ಣದ ಕೊಡವು। ಒಳಗೆ ನೋಡೆ ವಿಷ ತುಂಬಿಹುದು ॥
ಮೊದಲಿಗೆ ಸವಿ ಸವಿ ತೋರುವದು।
ತರತರದಲಿ ಮನ ಸೆಳೆಯುವದು ॥
ಕುಡಿಯಲು ಕರುಳನು ಕೊರೆಯುವದು।
ಹಿತಶತ್ರುಗಳಂದದಿ ಜನರ । ಹತಿಸುವದೈ ತಿಳಿಸದೆ ತಿರುಳ ॥೩॥

ವಿಷವನು ಕುಡಿದರೆ ಒಮ್ಮೆಲೆಯೇ। ಅಸುವನು ಹೀರುವದಾಕ್ಷಣವೇ ॥
ಸೆರೆ ಕುಡಿದರೆ ಉಸುರಿರುವವರೆಗೂ। ಬರುವವು ತರತರ ಕಷ್ಟಗಳೂ ॥
ವಿಷ ಕುಡಿದರೆ ಪ್ರಾಣವನೊಂದ। ಕಸಕೊಳ್ಳುವದೆಂಬುದು ಸಹಜ ॥
ಸೆರೆ ತನುಮನ ಪ್ರಾಣವ ಸಹಿತ। ಆತ್ಮವನು ಹತಗೊಳಿಸುವದು ॥
ಸರ್ವನಾಶಕರವೀ ಹೆಂಡ।
ಕುಡಿದವನಾಗುವನೈ ಭಂಡ ॥
ಆತನ ನರ ಜನ್ಮವೆ ದಂಡ।
ಈ ಪರಿ ಘಾತಕವಾಗಿಹುದು । ತಾಪತ್ರಯದಾಯಕ ಸೆರೆಯು ॥೪॥

ಭಾರತ ಮಂಗಲ ಭೂಮಿಯೊಳು। ಇರಬಾರದು ಸೇಂದಿಯ ಮಲವು॥
ಆರ್ಯ ಋಷಿಗಳ ಸ್ಥಾನದೊಳು। ದುರ್ಗುಣ ರಾಶಿಯು ಶೋಭಿಸದು॥
ಮಾರಿಮಸಣಿ ರಕ್ಕಸರೆಂದು। ದೂರಕೆ ತೊಲಗಿಸಬೇಕೆಂದು।
ಹುರಪಿನಿಂದ ಹೋರಾಡುವುದು। ವರ ನೀತಿಯ ಸಂಗ್ರಾಮವಿದು॥
ನಿರ್ವ್ಯಸನದ ಸುಖ ಸೇವಿಸಲು।
ನಿರ್ಮಲ ಜೀವನ ಸಾಗಿಸಲು॥
ಸಿಮರ್ಯಾದಕ ನಾಡೆನಿಸಲು।
ಕರ್ಮ ಕುಶಲತೆಯ ತೋರಿಸಿರಿ। ನಿರ್ಮೋಹದಿ ದುಡಿಯುವ ಬನ್ನಿ॥೫॥

**ಲೇಖಕರು : ತಿಳಿದಿಲ್ಲ**

# ೨೪. ಮೋದವ ಪಡೆಯಿರಿ

ಮೊಹರಂದ ಹಬ್ಬವ ಮಾಡಿ ಮೋದವ ಪಡೆಯಿರಿ ಸರ್ವರಾ।
ಭಾರತ ದೇಶದ ಪಾರತಂತ್ರ್ಯವ ಕಡಿಯುವ ವಿಚಾರಾ।
ಮಾರ್ಗದಿ ನಡೆಯಿರಿ ಸರ್ವರಾ।
ಕೇಳಿರಿ ಮೊಹರಂದ ಶಾಸ್ತ್ರವ ॥೧॥

ಉಡಬ್ಯಾಡ್ರಿ ಪರದೇಶದಿಂದ ಬಂದ ಜಿನಗಾದ ಧೋತರಾ।
ಸುಟ್ಟುಹಾಕ್ರಿ ಸರ್ವರ ಬೂಟು–ಹ್ಯಾಟು–ನೆಕ್‌ಟಾಯ್–ಕಾಲರಾ।
ಮೇಲಾದಂಥ ಬಡಿವಾರಾ।
ಬಿಟ್ಟುಬಿಡಿರಿ ಎಲ್ಲಾರಾ॥೨॥

ಕೈರಾಟೆಯಿಂದ ನೂಲ ತೆಗೆಯಿರಿ ಖಾದಿಯ ಭಂಡಾರಾ।
ಹಿಂದುಸ್ತಾನದ ಅರಿವಿಯ ಧರಿಸಿ ಮೆರೆಯಿರಿ ಬಾಂಧವರಾ।
ಹಿಂಗ ನಡದಿದ್ರೊ ಹಿರಿಯರಾ।
ನಮ್ಮ ಅಜ್ಜ–ಮುತ್ತಜ್ಜಂದಿರಾ ॥೩॥

ಕುಡಿಬ್ಯಾಡ್ರಿ ಚಹಾ ಅಂಗಡಿಗೆ ಹಾಕ್ರಿ ಬೇಗ ಬಹಿಷ್ಕಾರಾ।
ಒಡೆದು ಹಾಕ್ರಿ ಕಪ್ಪು–ಬಸಿ ಮೊದಲಾದ ಅದ್ದರ ಸಾಮಾನಾ।
ಫಳಾರ ಬ್ರೇಡು – ಬಿಸ್ಕೀಟು।
ಅದರಿಂದ ಸುಖವಿಲ್ಲ ಎಳ್ಳಷ್ಟು ॥೪॥

ಚಹಾದ ಪುಡಿಯೊಳ್ಗ ಕೂಡಿಸಿ ರಕ್ತವ ಬಿಸಿಲಿಗೆ ಹಾಕುವರಾ।
ಇಂಥ ಹೀನ ಚಟವ ಹಿಂದೂ ಜನರಿಗೆ ತಂದ ಕಲಿಸಿದರಾ।
ಇಂಥ ಕೆಟ್ಟ ವ್ಯಾಪಾರಾ।
ಮಾಡಿ ದುಡ್ಡು ಸೆಳೆಯುವರಾ ॥೫॥

ಸೋಡಾ ಲಿಂಬು ತಯ್ಯಾರು ಮಾಡಿ ಹಾಳು ಮಾಡು ಯಂತರಾ।
ಹೀಗೆ ವಿಸ್ತಾರಾ ಮಾಡಿ ನಮ್ಮ ದೇಶದ ದುಡ್ಡು ಸೆಳೆಯುವರಾ।

ಇಂಥ ಕೆಟ್ಟ ವಿಚಾರಾ
ಬಿಟ್ಟು ಬಿಡಿರಿ ಎಲ್ಲಾರಾ ॥೬॥

ಮೀಸಿಗೆ ಪ್ರೆಂಚಕಟ್ಟಿ ಮಾಡಿಸಿ ಸಿಗ್ರೇಟ್ ಸಿಗಿಸಿ ಸೇದುವರಾ।
ಷಂಡರಾಂಗ ಕಾಣಸ್ತೀರಿ ಗಂಡಸ್ತಾನಾ ಇಲ್ಲದವರಾ।
ಇಂಥ ಪರದೇಶದ ವಿಚಾರಾ।
ಅದರಾಗ ವಿಸ್ಮೃತಿ ಮಜಕೂರಾ ॥೭॥

ಸರಕಾರದೊಡನೆ ಅಸಹಕಾರ ಮಾಡಿ ದೇಶೋದ್ಧಾರಾ।
ಸರ್ವರೂ ತಯ್ಯಾರಾಗಿ ಸಲ್ಲಿರಿ ಗಾಂಧಿ ಮಹಾತ್ಮಾರಾ।
ಹೇಳಿದ ತತ್ವ ವಿಚಾರ।
ಕೇಳಿರಿ ಶ್ರೀಕಂಠ ಕವಿಸಾರ ॥೮॥

**ಲೇಖಕರು : ಸಲವಡಿ ಶ್ರೀಕಂಠಶಾಸ್ತ್ರಿಗಳು**
(ಸಂಗ್ರಹಕಾರರು : ಡಾ। ಮೃತ್ಯುಂಜಯ ಹೊರಕೇರಿ)

## ೨೫. ನಾವು ಬಂದದ್ದು ಯಾತಕ್ಕ

(“ನಾವು ಬಂದೇವ ಶ್ರೀಶೈಲ ನೋಡದಕ್ಕ” ಎಂಬಂತೆ)

ನಾವು ಬಂದೇವ, ನಾವು ಬಂದೇವ, ನಾವು ಬಂದೇವ।
ರಾಷ್ಟ್ರ ಸ್ವತಂತ್ರ ಮಾಡೋದಕ್ಕ।
ರಾಷ್ಟ್ರ ಸ್ವತಂತ್ರ ಮಾಡೀ ಕಷ್ಟಾ ಕಳಿಯೋದಕ್ಕ ॥ಪಲ್ಲವಿ॥

ನಿಷ್ಠಾವಂತ್ರಾಗೀಯಲ್ಲಾರ್ನಾವು ದುಡಿಯ್ಯೋದಕ।
(ವ)ರಿಷ್ಟ ಮುಂದಿನ್ಕರದೇವೀ ಸಭಾಕ್ಕ।
ಶ್ರೇಷ್ಠ ಭಾರತಮಾತೇ ಸೇವಾ ಮಾಡೋದಕ್ಕ। ಸೇವಾ ಮಾಡೋದಕ್ಕ।
ರಾಷ್ಟ್ರ ಸ್ವತಂತ್ರ ಮಾಡೀ ಕಷ್ಟಾ ಕಳಿಯೋದಕ್ಕ ॥ ನಾವು॥

ಕಟ್ಟ ಕಡೆಯಲ್ಲಿ ಬಿಷ್ಟಂಣಾ ಬಂದ ಹಾಡೋದಕ್ಕ।
ಬಿಷ್ಟ ಹಾಡೋದಿಲ್ಲ ನಿಷ್ಠೂರಾಗಿ ಮನಕ್ಕ।

ಅಷ್ಟೂರೊಟ್ಟಾಗಿ ನಿಂದ್ರೂ ನಮ್ಮ ಕಡತಕ್ಕ॥ಕಷ್ಟ ಸೋಸೋದ॥
ಕಷ್ಟ ಸೋಸೋದ ಬಿಟ್ಟೋಡ್ತತೀ ಯಾತಕ್ಕ।
ರಾಷ್ಟ್ರ ಸೇವಾ ಮಾಡೀ ಕಷ್ಟಾ ಕಳಿಯೋದಕ್ಕ॥ನಾವು॥

ಕಷ್ಟಸೋಸೋದಕ್ಕ ಒಟ್ಟಾ ಗ್ರೆಪಾ ಚೊಕ್ಕ।
ಶ್ರೇಷ್ಠಗಾಂಧೀ ಅಹಿಂಸಾ ತತ್ವಕ್ಕ।
ಭ್ರಷ್ಟರಾಳಿಕೀ ಮುದ್ದ ಮೂಲಿಗೊತ್ತೋದಕ್ಕ। ನಿಷ್ಠೂರಾಗೀ।
ಅಷ್ಟುರೊಟ್ಟಾಗ್ರೆಪ್ಪಾ ನೀವು ತತ್ಕಾಲಕ್ಕ।
ರಾಷ್ಟ್ರ ಸೇವಾ ಮಾಡೀ ಕಷ್ಟಾ ಕಳಿಯೋದಕ್ಕ ॥ ನಾವು ॥

ವಟ್ಟಿಗೊಂದ್ಮಾತ ಹೇಳುವೆನಾ ಠೀಕ।
ಅಟ್ಟಾಯೇರಿ ಬಂದ ಹೇಳಿದ್ದ ಕವನಕ್ಕ।
ರಾಷ್ಟ್ರ ಯೋಧರಾಗೀ ರಾಷ್ಟ್ರ ಸೇವಾದಲಕ್ಕ।ನಿಷ್ಠೆಯಿಂದ।
ನಿಷ್ಠೆಯಿಂದ ಬಂದ ಕಷ್ಟಾ ಬಿಡಸೋದಕ್ಕ।
ರಾಷ್ಟ್ರ ಸ್ವತಂತ್ರ ಮಾಡೀ ಕಷ್ಟಾ ಕಳಿಯೋದಕ್ಕ ॥ ನಾವು ॥

**ಕವಿ : ಬಿಷ್ಟಪ್ಪ ಕುಬೇರಪ್ಪ ಮುಂಡೇದ**
(ಹಸ್ತಪ್ರತಿಯಿಂದ)

# ೨೬. ಬದಲಾವಣೆಯೇ ಜೀವನದ ನಿಯಮ

ಇದ್ದಂತೆಯೆ ನಾವಿರೋಣವೆಂಬುವ ಮುಗ್ಧ ಧೋರಣೆಯಲಿ ಹುರುಳಿಲ್ಲಾ।
ಶುದ್ಧಮನದೊಳಿದ ತಿಳಿದುನೋಡಿ, ಜೀವಂತತನದ ಲಕ್ಷಣವಲ್ಲಾ॥

ಮುದ್ದು ಪ್ರಕೃತಿಯು ಇದ್ದಂತಿರುವದೇ? ಬುದ್ಧಿವಂತರಿದನರಿತೆಲ್ಲಾ।
ತಿದ್ದಿದ ನವನವ ಯೋಜನೆಕಾಲದಿ ಬುದ್ಧಿಶೂನ್ಯರಾಗಿ ಫಲವಿಲ್ಲಾ॥

ಇದ್ದಂತೆಯೆ ಇರಲೆಂದುಕೊಳ್ಳ ಮಹಮನ್ವಂತರ ದಾಟಹುದಲ್ಲಾ।
ಇದ್ದುದನೆಲ್ಲವ ಬದಲಾಯ್ಸುವ ಘನ ಎದೆಗಾರಿಕೆಯುಗವೀಗೆಲ್ಲಾ॥

ಯುಗಬದಲಾವಣೆಗನುಗುಣವಾಗಿ ಸಮಾಜದ ಸ್ಥಿತಿಗತಿಗಳು ಯಲ್ಲಾ।
ಬಗೆಬಗೆಯಿಂದಲಿ ಬದಲಾವಣೆಯಾಗಿರುತಿರ ಬೇಕಾಗಿದೆಯಲ್ಲಾ॥

ಈ ಬದಲಾವಣೆಯಿಂದ ಪ್ರಯೋಜನ ಮಂದಿಗೆ ಸಿಗುವಂತಿಹುದೆಲ್ಲಾ।
ವಿಭವದಿ ವ್ಯಕ್ತಿಯ ಮತ್ತು ಸಮಾಜವ ಸಾಧನೆಯಾಗಿರಬೇಕಲ್ಲಾ॥

**ಲೇಖಕರು: ಎನ್. ವಿಷಕಂಠರಾವ್**

('ಕಾಂಗ್ರೆಸ್ ವಿಶೇಷ ಲಾವಣಿ', ಮೈಸೂರು - 1939)

# ೨೮. ನಾವು ಮತ್ತು ನಮ್ಮವರ ಹಾಡು

ದೇಶಸೇವೆ ಮಾಡ್ವರಾರ್ । ಈಶಸೇವೆ ಗೈಯ್ವರಾರ್ । ದೇಶಕಾಗಿ
ಸಾಯ್ವರಾರ್ । ನಾವಲ್ಲವೆ ನಮ್ಮ ಜನರಲ್ಲವೆ । ಆಶೆಯನ್ನು ತೂರೆದ
ವರಾರ್ । ದೇಶಕ್ಕಾಗಿ ದುಡಿದವರಾರ್ । ಆ ಸ್ವರಾಜ್ಯ ಪಡೆವರಾರ್ ।
ನಾವಲ್ಲವೆ ॥ ಪಲ್ಲವಿ ॥

ಹಿಂದು ಮುಸಲಿಂ ಎಂಬುವರಾರ್ । ಬಂಧು ಭಾವ ಬೆಳೆಸಿದವರಾರ್ ।
ಒಂದೆ ತಾಯಿ ಮಕ್ಕಳೆಲ್ಲ । ನಾವಲ್ಲವೆ ನಮ್ಮ ಜನರಲ್ಲವೆ । ಪಂಡಿತ್
ನೆಹ್ರೂ ಎಂಬುವರಾರ್ । ಖಂಡಿತವಾದಿ ಜಿನ್ನಾರಾರ್ । ಹಿಂದೂಸ್ಥಾನ
ದವರು ಯಾರ್ ನಾವಲ್ಲವೆ ॥೧॥

ಜೋಕಿನಿಂದ ಹೇಳ್ವರಾರ್ । ಪಾಕಿಸ್ಥಾನ ಕೇಳ್ವರಾರ್ । ಸಾಕುಮಾಡ್ರಿ
ಎಂಬುವರಾರ್ । ನಾವಲ್ಲವೆ ನಮ್ಮ ಜನರಲ್ಲವೆ । ಜೋಕೆ ಜೋಕೆ ಎನ್ವ
ರಾರ್ । ಬೇಕೆ ಬೇಕು ಎನ್ನುವರಾರ್ । ಪಾಕಿಸ್ಥಾನ ಕೋರುವವರಾರ್ ।
ನಾವಲ್ಲವೆ ॥೨॥

ಯೋಗಿ ರೈತರೆಂಬುವರಾರ್ । ತ್ಯಾಗಮೂರ್ತಿ ಎಂಬುವರ್ಯ್ಾರ್ । ಬಾಗಿ
ತಲೆಯ ನಡೆವರಾರ್ । ನಾವಲ್ಲವೆ ನಮ್ಮ ಜನರಲ್ಲವೆ । ಆಗು ಹೋಗು
ಬೇಡ್ವರಾರ್ । ಭೋಗ ದಿನವು ಪಡುವವರಾರ್ । ರಾಗದಿಂದ ಮೆರೆವರಾರ್ ।
ನಾವಲ್ಲವೆ ॥೩॥

ಕಷ್ಟಪಟ್ಟು ಬೆಳೆವರಾರ್ । ಹೊಟ್ಟೆಗಿಲ್ದೆ ಕೊರಗುವರಾರ್ । ಬಟ್ಟೆ ಇಲ್ದೆ ನಡುಗುವರಾರ್ । ನಾವಲ್ಲವೆ ನಮ್ಮ ಜನರಲ್ಲವೆ । ಶ್ರೇಷ್ಠ ದೈತರೆಂಬುವ ರಾರ್ । ನಿಷ್ಠೆಯಿಂದ ದುಡಿವರಾರ್ । ರಾಗದಿಂದ ಮೆರೆವರಾರ್ ।
ನಾವಲ್ಲವೆ ॥೪॥

ಸಕ್ಕರೆಯ ತಯಾರ್ಮಾಡುವರಾರ್ । ಸಕ್ಕರೆ ಕಬ್ಬ ಬೆಳೆವರಾರ್ । ಸಕ್ಕರೆಗೆ ಹಲ್ಲ ಕಿರಿವರಾರ್ । ನಾವಲ್ಲವೆ ನಮ್ಮ ಜನರಲ್ಲವೆ । ಅಕ್ಕಿ ರಾಗಿ ಬೆಳೆವರಾರ್ । ಹೊಕ್ಕು ಡಿಪ್ಪೋಲ್ ಕೊಳ್ಳುವರಾರ್ । ಮೆಕ್ಕೆ ಜೋಳ ತಿನ್ನರಾರ್ ।
ನಾವಲ್ಲವೆ ॥೫॥

ತೋಟಿ ತಳವಾರ್ ಎಂಬುವವರಾರ್ । ಪಟೇಲ ಶ್ಯಾನುಬೋಗ್ ಎನ್ನರಾರ್। ಹ್ಯಾಟಿನ್ಸಮಲ್ದಾರರಾರ್ । ನಾವಲ್ಲವೆ ನಮ್ಮ ಜನರಲ್ಲವೆ । ಹ್ಯಾಟ ಹಿಡಿದು ಮೆರೆವರಾರ್ । ಬೂಟ ಹಾಕಿ ನಡೆವರಾರ್ । ಮೋಟಾರ್ ಹತ್ತಿ ಓಡುವರಾರ್ । ನಾವಲ್ಲವೆ ॥೬॥

ಲಂಚ ಲಂಚವೆನ್ನುವರಾರ್ । ಲಂಚಕ್ಕೈಯ್ಯ ಒಡ್ಡುವರಾರ್ । ಲಂಚಕೊಟ್ಟು ತೋರ್ದವರಾರ್ । ನಾವಲ್ಲವೆ ನಮ್ಮ ಜನರಲ್ಲವೆ । ಹೊಂಚು ಹಾಕಿ ಕಾಯ್ದುವರಾರ್ । ಸಂಚು ನೋಡಿ ನೀಡ್ವರಾರ್ । ಲಂಚಕಾಗೆ ದುಡಿದವರಾರ್
ನಾವಲ್ಲವೆ ॥೭॥

ಲೇಖಕರು : ಜಿ. ನಾರಾಯಣ
('ರಾಷ್ಟ್ರೀಯ ಪದಗಳು',1946)

# ೨೮. ಕಾಂಗ್ರೆಸ್ ಲಾವಣಿ

ಧಾಟಿ: ಖಿಟೀಚಾಲ್

ಶೃಂಗಾರದ ನವರಂಗದ ಮೈಸೂರ್ ಕಾಂಗ್ರೆಸ್ ಘನವೆನ್ನುವನೊಬ್ಬ।
ಕಾಂಗ್ರೆಸ್‌ನ ಸಂಗ್ರಾಮವ ಕೇಳಿದ ಆಂಗ್ಲರಿಗಾಯಿತು ಅಬ್ಬಬ್ಬಾ ॥ಪ॥

ಅಬ್ಬಬ್ಬಾ ಈ ದಬ್ಬಾಳಿಕೆ ಅವನೊಬ್ಬನ ದೆಶೆಯಿಂದೆನ್ನುತ್ತಲೊಬ್ಬಾ।
ದಬ್ಬಾಳಿಕೆಯನು ಎಬ್ಬಿಸಿದವ ನಿಜ ತಬ್ಬಲಿ ಎಂದನು ಮತ್ತೊಬ್ಬ॥

ಒಬ್ಬನಿಂದಲ್ಲವು ಶಿಬ್ಬಂದಿಬಳಗಾ ಕಬ್ಬಕ್ಕಿ ಎಂತಿಹರೆನುತೊಬ್ಬ।
ಕೊಬ್ಬಿದ ದರ್ಪದ ಮೊಬ್ಬಿನೊಳಿರುವರ ಹಬ್ಬವಿದೆಂದನು ಹುಡುಗೊಬ್ಬ।
ದಬ್ಬಾಳಿಕೆಸುಳಿ ಅಬ್ಬರ ಅಣಗಲಿ ದೆಬ್ಬೆಯು ಬಿತ್ತೆನಗೆನುತೊಬ್ಬ।
ದಬ್ಬಾಳಿಕೆ ಮಹ ಬೊಬ್ಬೆಯ ಕೇಳುತ ತಬ್ಬಿಬ್ಬಾದನು ಕಡೆಗೊಬ್ಬ।

## ದೊಡ್ಡುಡನ್

ಎಂತ ಕಾರ್ಯವಿದು ಎಂತ ಚೋದ್ಯವಿದು ಹೊಂತಕಾರಿಗಳೆಯೋಚಿಪುದು।
ಅಂತುಯಿಂತು ಈ ಶಾಂತಿಯಸಮರವು ಕ್ರಾಂತಿಯ ರೂಪಾವರಿಸಿಹುದು।
ಅಂತರದೊಳಗಿನ ಅನಂತ ಆಸೆಗೆ ಅನರ್ಥ ಫಲ ಕೈಸೇರುವುದು।
ಇಂತ ಭ್ರಾಂತಿಯನು ಕಂತೆಯಕಟ್ಟಿಸಿ ಸಂತೆಗೆ ಸಾಗಿಸೆ ಸುಖವಹುದು॥

## ಉಡನ್

ನ್ಯಾಯವೆಂಬುದೆ ಸಾಧನ ಕಾಂಗ್ರೆಸ್ಸಿನ ಘನ ಧ್ಯೇಯ।
ಧ್ಯೇಯವಿದೊಂದೆ ಶಾಂತಿಯೆ ಸಮರದೊಳಿಡುವುದೆ ಕಾಯ।
ಕಾಯವಿಟ್ಟಂತೆ ಪ್ರಮುಖರ ಸುಕೀರ್ತಿ ಪುಂಜದ ಛಾಯ।
ಛಾಯ ಪ್ರಜ್ವಲ ಭಾರತ ದೇಶದ ಉನ್ನತಿ ನ್ಯಾಯಾ॥

## ಗುಲ್ಲುಡನ್

ಪ್ರಜೆಗಳಾಜನ್ಮ ಹಕ್ಕನಿಟ್ಟು । ನಿಜದೆ ಸ್ವಾತಂತ್ರ್ಯಗಳನು ಕೊಟ್ಟು ।
ರಾಜ್ಯವನ್ನಾಳಲು ಬಿಕ್ಕಟ್ಟೂ । ಪೂಜ್ಯ ಬಾಂಧವರ ಬಂಧನದಿಂದಲಿ ಬಿಡಲತಿ ಫಲವುಂಟೂ ।

## ಶ್ಲೋಕ

ಎಂದು ಬೇಡುತ ಬಂದ ಜನರಿಗೆ ಬಂಧನವೆ ನಿಜವೆಂದರು ।
ಮುಂದಿನೊಳು ನೂರ್ನಲ್ವತ್ನಾಲ್ಕನೆ ಸೆಕ್ಷನ್ ಜಾರಿಗೆ ತಂದರು ॥

## ಚಾಲ

ಇಂಗ್ಲೆಂಡ್ ದೇಶದ ಇಂಗ್ಲೀಷರಿಂದಲಿ ಕಂಗೆಟ್ಟೆವು ನಾವೆನುತೊಬ್ಬ ।
ಕಾಂಗ್ರೆಸ್ ಸೆಶನ್ ಸಂಗ್ರಾಮುವ ಕೇಳಿದ ಆಂಗಲ್ಲರಿಗಾಯಿತು ಅಬ್ಬಬ್ಬಾ ।
ಅಟ್ಟಹಾಸದಿಟ ನಲವತ್ತೈದನೆ ಸೆಕ್ಷನ್ ಜಾರಿಯ ಒಳಗುಟ್ಟು ।
ಬೆಟ್ಟದಿ ಸೆಕ್ಷನ್ ಶವವನು ಮಾಡಿ ಹೊತ್ತನು ಸಂಭಾಜಿ ಶ್ರಮಪಟ್ಟು ॥
ಬಿಟ್ಟರೆ ಸಿಕ್ಕದ ಕೊಟ್ರೆ ನಂಜಪ್ಪನ ತಟ್ಟನೆ ಹಿಡಿದರು ಕಣ್ಣಿಟ್ಟು ।
ಕೊಟ್ಟರು ಸಜವನು ಹೊಸಕೋಟೆಯ ಮಹದೇವಶಾಸ್ತ್ರಿಗಳ ಹಿಡಿದಿಟ್ಟು ।
ಕಷ್ಟ ಕಷ್ಟಮಹ ಕಷ್ಟವಿದೆನ್ನುವ ಎಷ್ಟೋ ಜನರಿಗೆ ಛಡಿಪೆಟ್ಟು ।
ಇಷ್ಟರೊಳಗೆ ನೂರೇಳನೆ ಸೆಕ್ಷನ್ ಬಿಟ್ಟರು ತಟ್ಟನೆ ಗುರಿಯಿಟ್ಟು ॥

## ದೊಡ್ಡುಡನ್

ಒಡನೆಯೆ ಶಿದ್ದಲಿಂಗಯ್ಯನವರನು ಹಿಡಿದರು ಖಾನೂನ್ ಅನುಸರಿಸಿ ।
ಬಿಡದೆಲೆ ಸೀತಾರಾಮ ಶಾಸ್ತ್ರಿಗಳನಿಡಿದರು ಕೇಸಿನ ಕ್ರಮನಡೆಸಿ ।
ತದಕು ತಗಡೂರ್ ರಾಮಚಂದ್ರನು ಹಿಡಿದು ತ್ರಿಜನರಂಜೊತೆಗೊಳಿಸಿ ।
ಹಿಡಿಯಿರಿ ಸೆರೆಮನೆದಾರಿ ನೀವೆನ್ನುತ ನುಡಿದರು ದರ್ಪದಿ ದಡಬಿಡಿಸಿ ॥

### ಉಡನ್

ಮುಂದಾದ ಪರಿಯ ನೀವ್ ಚಂದದಿ ಕೇಳಿರಿಯಲ್ಲಾ ।
ಬಂಧನದಿ ಬಿದ್ದ ನಮ್ ದೇಶ ಮುಖಂಡ್ರಿಗೆಲ್ಲ ।
ಒಂದಾದರು ಸರಿ ಅನುಕೂಲವಿಲ್ಲದೋಯ್ತಲ್ಲ ।
ಎಂದೆಂದಿಗು ಸರಕಾರ್‌ನಡತೆ ಇದುವೆ ಸರಿಯಿಲ್ಲಾ ॥

### ಗುಲ್ಲುಡನ್

ಕೂಡಿತೂ ಸರ್ಕಾರದ ಕೂಟ । ಮಾಡಿದರು ಯೋಚನೆಯನು ದೀಟ ।
ಹೂಡಿ ನೂರಿಪ್ಪತ್ನಾಲ್ಕರೇಟ । ಕೂಡಲೆ ಕಾಂಗ್ರೆಸ್ ವೀರಮುಖಂಡರ
ಹಿಡಿದರು ಅಕಟಕಟಾ ॥

### ಶ್ಲೋಕ

ಕೆ. ಟಿ. ಭಾಷ್ಯಂ, ಎನ್. ಸಿ. ತಿಮ್ಮಾರೆಡ್ಡಿಯವರುಗಳ್ ನಿಶ್ಚಯ ।
ಕೋರ್ಟಿನೊಳು ಕೇಸ್‌ವಾದವಿಲ್ಲದೆ ಹೊಂದಿದರು ಮಹ ಶಿಕ್ಷೆಯ ॥

### ಚಾಲ್

ಢಂಗಾದರು ನಮ್ ಬೆಂಗ್ಳೂರ್ ಪ್ರಜೆಗಳು ಹಿಂಗ್ಯಾಕ್ ಮಾಡಿದರೆನುತೊಬ್ಬ ।
ಕಾಂಗ್ರೆಸ್ ಘನ ಸಂಗ್ರಾಮುವ ಕೇಳಿದ ಆಂಗ್ಲರಿಗಾಯಿತು ಅಬ್ಬಬ್ಬಾ ॥

ಶ್ರೀನರಿಮನ್ನರು ಭಾಷಣ ಮಾಡಿದ ಬನಪ್ಪಪಾರ್ಕಿನ ವಿವರಗಳು ।
ಏನೇಳಲಿ ನಾ ಮುವತ್ತೊಂಭತ್ತನೆ ಸೆಕ್ಷನ್ ಜಾರಿಯು ಗಲಭೆಗಳು ॥
ಶ್ರೀನರಿಮನ್ನರ ಭಾಷಣ ಕೇಳಲು ಅನೇಕ ಪ್ರಜೆಗಳು ಕೂಡಿರಲು ।
ಆ ನರಿಮನ್ನರ ಅಕ್ಷಣ ಹಿಡಿಯಲು ಅನಂತ ಜನಗಳ ಜೋಡುಗಳು ॥
ಖಾನೂನೆಂಬುವ ಜ್ಞಾನವೆಯಿಲ್ಲದೆ ಮೇಲಿಂದ ಬಿದ್ದವು ಬೂಡ್ಸುಗಳು ।
ದೀನ ಗುಂಡಪ್ಪನ ಪ್ರಾಣವೆ ಹಾರಿತು ಮಾರನೆ ದಿನ ಗುಂಡೇಟಿನೊಳು ॥

## ದೊಡ್ಡುಡನ್

ಕೇಳಿರೆಲ್ಲ ಮುವತ್ತೇಳನೆ ಇಸವಿಯ ಅಕ್ಟೋಬರಿಪ್ಪತ್ತೈದರೊಳು।
ಪೇಳಲಿಕಸದಳ ಗಲಭೆಯ ಹಾವಳಿ ಕೆಂಪೇಗೌಡರ ಚೌಕದೊಳು॥
ತಳಮಳಗೊಳ್ಳುವ ಗೋಲಿ ಏಟುಗಳು ನೋಡಿಮರುಗೆ ವಿದ್ಯಾರ್ಥಿಗಳು।
ತಾಳದೆ ಪೆಟ್ಟನು ಬಿದ್ದರೆಷ್ಟೋ ಜನ ವಿಕ್ಟೋರಿಯ ಆಸ್ಪತ್ರೆಯೊಳು॥

## ಉಡನ್

ಕ್ಷಣಮಾತ್ರದೊಳೀರಣ ಕ್ಷೇತ್ರ ಗಲಭೆ ಬಯಲಾಗಿ।
ಘನವೊಂದಿದ ಲಾಯರ್ ಜನಗಳೆಲ್ಲ ಗುಂಪಾಗಿ॥
ದಣಿಯುತಲಿ ದ್ವಿಪಕ್ಷಕು ಬೇಡಿದರತಿ ಚೆಂಡಾಗಿ।
ಅಣಗಿಸಿದರು ಘನತೆಯ ಗಲಭೆಯನ್ನು ಸಮವಾಗಿ॥

## ಗುಲ್ಲುಡನ್

ಮೇಲಿನಧಿಕಾರಿಗಳನು ಕಂಡು। ತಾಳಿಸೀವ್ ಸಹನೆಯನುರಿಗೊಂಡು।
ಪೇಳಲತಿ ನೀತಿಯ ಶ್ರಮಗೊಂಡೂ। ಕಾಲಿಗೆ ಬುದ್ದಿಯನೇಳಿದರಾಕ್ಷಣ
ಕಳವಳ ಕೈಗೊಂಡೂ॥

## ಶ್ಲೋಕ

ಇಲ್ಲ ಪೋಲೀಸ್ ಡ್ಯೂಟಿ ಇಲ್ಲವು ಇಲ್ಲ ಸರ್ಕಾರಾದಿನ।
ಎಲ್ಲಿ ನೋಡಿದರಲ್ಲಿ ಗುಲ್ಲು ಎಲ್ಲ ನಿಂತಿತು ಮರುದಿನಾ॥

## ಚಾಲ್

ಕಾಂಗ್ರೆಸ್ ಒಂದನೆ ಬೆಂಗ್ಳೂರ್ ಮೂರನೆ ಜಂಗಾಯಿತು ಇದು ಏನುತೊಬ್ಬ।
ಕಾಂಗ್ರೆಸ್ ಘನಸಂಗ್ರಾಮವ ಕೇಳಿದ ಆಂಗ್ಲರಿಗಾಯಿತು ಅಬ್ಬಬ್ಬಾ॥
ಈ ಕರ್ನಾಟಕ ಸ್ವರಾಜ್ಯ ಪಕ್ಷದ ಕಾಂಗ್ರೆಸ್ಸಿನ ಘನ ಶೋಭಾನ।
ಶ್ರೀ ಕೆ. ಚಂಗಲರಾಯರೆಡ್ಡಿಗಳ ಸರ್ವಾಧಿಕಾರದ ಸುಧಾರಣ॥
ಲೋಕದಿ ವಿ. ಎಸ್. ನಾರಾಯ್ಣರಾಯರ ಕಾರ್ಯದರ್ಶಿತನ ಮಹಾಘನ।

ಶ್ರೀಕರ ಹೆಚ್. ಸಿ. ದಾಸಪ್ಪನವರಾ ಶೀಘ್ರಾಲೋಚನ ಸುಭಾಷಣ ॥
ಸ್ತ್ರೀಕುಲಭೂಷಿಣಿ ಶ್ರೀಮತಿ ಬಳ್ಳಾರಿ ಸಿದ್ದಮ್ಮನವರಾ ಧೀರತನ ।
ವ್ಯಾಕುಲವಳಿಯುವ ಬಂಧುಭಗಿನಿಯರ ಸ್ವದೇಶಭಕ್ತಿಯ ಅಭಿಮಾನ ॥

## ದೊಡ್ಡುಡನ್

ದೇಶದ ಸೇವೆಯ ಮಾಡುವುದೆ ಈ ದೇಶಬಾಂಧವರ ಉದ್ದೇಶ ।
ದೇಶದ ಬಡತನ ನಾಶಮಾಡಲು ಹೇಸದೆ ದುಡಿಯುವದತಿ ಹರುಷ ॥
ದೇಶ ಪ್ರೀತಿಗಿದು ವಿಶೇಷಭೂಷಣ ಚಂದೂರರ ಮಹ ಉಪವಾಸ ।
ದೇಶದ ದುಸ್ಥಿತಿ ದೂಡುವದೇ ನಮ್ ಕಾಂಗ್ರೆಸ್ಸಿನ ಕಡೆ ಸಂದೇಶ ॥

## ಉಡನ್

ರೈತಾಪಿಯ ಕಷ್ಟವೆ ತಮ್ಮಯ ಕಷ್ಟವೆಂದಿರುವರು ।
ರೈತಾಪಿಸುಧಾರಣೆ ಸಾಧಿಸುತಲಿರುತಿಹರು ॥
ರೈತಾಪಿಜನಾಂಗದ ಕುಂದುಕೊರತೆ ಅರಿತಿವರು ।
ರೈತಾಪಿಯ ಕಷ್ಟಗಳೆಲ್ಲ ಬಿಡದೆ ಹರಿಸುವರು ॥

## ಗುಲ್ಲುಡನ್

ಇದುವೆ ನಿಜ ಬೂಟಕವೇನಲ್ಲ । ಬುಧರೆ ಇದು ಯೋಚಿಸಿ ನೀವೆಲ್ಲ ।
ಚದುರ ಸರಿಯಿಲ್ಲವರರಿಗೆ । ಮದರಾಸಿನ ಘನ ಪ್ರಧಾನಮಾತ್ಯರ ಉದಾರ
ವ್ಯಾಕಿಲ್ಲಾ ॥

## ಶ್ಲೋಕ

ವಾಕ್, ಸಭಾ ಮೇಣ್ ಪತ್ರಿಕಾಸ್ವಾತಂತ್ರ್ಯ ಮೈಸೂರ್ ಜನರಿಗೆ ।
ಬೇಕಾಗಿರುವುದು ಜಬಾಬ್ದಾರ್ ಸರಕಾರ ಘನ ಮೈಸೂರಿಗೆ ॥

## ಚಾಲ್

ಮಂಗಳ ಸುಬ್ರಹ್ಮಣ್ಯ ಜೋಯಿಸ್ ರಂಗರಾಮರಿಗೆ ಏಸುತೊಬ್ಬ ।
ಕಾಂಗ್ರೆಸ್ ಘನ ಸಂಗ್ರಾಮವ ಕೇಳಿದ ಆಂಗ್ಲರಿಗಾಯಿತು ಅಬ್ಬಬ್ಬಾ ॥
ಘಾತುಕ ಜನರಿಗೆ ನೀತಿಯ ಬೋಧಿಸಿ ಖ್ಯಾತಿಯಪೊಂದಿದೆ ನಮ್ ಕಾಂಗ್ರೆಸ್ ।
ಬೋತೆರ ದೀನನಾಥರ ಪರಿಪರಿ ಯಾತನೆ ಕಳೆಯುವುದೀ ಕಾಂಗ್ರೆಸ್ ॥

ಪ್ರೀತಿಲಿ ಸರ್ವಜನಾಂಗದ ಹಿತವನೆ ಸಾಧಿಸುತ್ತಿರುವುದು ನಮ್ ಕಾಂಗ್ರೆಸ್ ।
ಕಾತುರದಿಂದಲಿ ನೂತನ ವ್ಯಥೆಗಳ ಘಾತಕ ಹರಿಸುವುದೀ ಕಾಂಗ್ರೆಸ್ ॥
ಜಾತಿಯ ಭೇದದ ರೀತಿಯ ವರ್ಜಿಸಿ ಕೀರ್ತಿಯಪೊಂದಿದೆ ನಮ್ ಕಾಂಗ್ರೆಸ್ ।
ರೈತರು ಏಳಿಗೆ ಕರ್ತವ್ಯ ಲಾಲಿಸಿ ಪ್ರಾರ್ಥಿಸುತ್ತಿರುವುದು ನಮ್ ಕಾಂಗ್ರೆಸ್ ॥

ಲೇಖಕರು : ಬಿ. ನೀಲಕಂಠಯ್ಯ
(ಮುದ್ರಿತ ಪುಸ್ತಿಕೆಯಿಂದ )

# ಕೃತಿ ಋಣ

1. 'ರಾಷ್ಟ್ರೀಯ ಗೀಗೀ ಪದಗಳು', ಬಸಪ್ಪ ಸಂಗಪ್ಪ ಬೆಟಗೇರಿ (ಹುಲಕುಂದ ಭೀಮಕವಿ) ಮತ್ತು ಬಸಪ್ಪ ಮಿರ್ಜಿ, ಬಾಗಲಕೋಟೆ, ( 1939 )
2. 'ದೇಶೀಯ ದುಮದುಮ್ಮೆ', 'ಸೀತಾತನಯ', ಧಾರವಾಡ, 1921
3. 'ಸೇವಾದಲದ ಗೀತೆಗಳು'. ಸಂ: ಬುರ್ಲಿ ಬಿಂದುಮಾಧವ, ಧಾರವಾಡ, 1946
4. 'ನಾಡಹಾಡುಗಳು', ಸಂ: ಬುರ್ಲಿ ಬಿಂದುಮಾಧವ, ಧಾರವಾಡ, 1946
5. 'ಕಾಂಗ್ರೆಸ್ ವಿಶೇಷ ಲಾವಣಿ', ಎನ್. ವಿಷಕಂಠರಾವ್, ಮೈಸೂರು, 1939
6. 'ಕರ್ನಾಟಕ ವಿಜಯ', ಎನ್. ವಿಷಕಂಠರಾವ್, ಮೈಸೂರು, 1937
7. 'ಜಯಂತಿ ಲಾವಣಿ ಕಾಣಿಕೆ', ಎನ್. ವಿಷಕಂಠರಾವ್, ಮೈಸೂರು, 1949
8. 'ಜೈ ಭಾರತ ರಾಷ್ಟ್ರ ಗೀತೆಗಳು', ವಿಚಾರ ಸಾಹಿತ್ಯ, ಬೆಂಗಳೂರು , 1949
9. 'ರಾಷ್ಟ್ರೀಯ ಪದ್ಯಗಳು', ಸಿದ್ದಾಪುರದ ತಿಪ್ಪಯ್ಯ ಮಾಸ್ತರ್, ಕುಮಟಾ, 1930
10. 'ನೂತನ ತುರಾ ಲಾವಣಿ', ಬಿ. ನೀಲಕಂಠಯ್ಯ, ಬೆಂಗಳೂರು, 1946
11. 'ರಾಷ್ಟ್ರಗೀತ ರತ್ನಾಕರ' (1924) ಮತ್ತು 'ಸ್ವರಾಜ್ಯ ಗೀತಾಮೃತ ' (1946) ಪುಂಡೂರು ಲಕ್ಷ್ಮೀನಾರಾಯಣ ಪುಣಿಂಚಿತ್ತಾಯ, ಮಂಗಳೂರು
12. 'ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಸಮರ', ಬಾ. ಯ. ದೇಶಪಾಂಡೆ (ಅಂಣು ಗುರೂಜಿ) ಬೆಳಗಾವಿ, 1973
13. ತೀರ ಕಿರಿದಾದ ಎರಡು ಪುಸ್ತಕಗಳು ತೀರ ಕಿರಿ ಅಕ್ಷರಗಳಲ್ಲಿ ಮುದ್ರಿತವಾಗಿದ್ದು ಮುಖಪುಟ, ಆರಂಭದ ಪುಟಗಳು ಹರಿದಿರುವುದರಿಂದ ಅವುಗಳ ಹೆಸರು, ಮುದ್ರಣ ವರ್ಷ, ಮುದ್ರಿತ ಊರು ತಿಳಿದಿಲ್ಲ. ಇವು ದಕ್ಷಿಣ ಕನ್ನಡದಿಂದ ಬಂದಿದ್ದವು. ಇವುಗಳನ್ನು ಮುದ್ರಿತ ಎಂದು ಅವುಗಳಿಂದ ಪಡೆದ ಪ್ರತೀ ಹಾಡಿನ ಕೆಳಗೆ ಸೂಚಿಸಿದೆ. ಅವುಗಳಿಂದ ಕೆಲವು ಜನಪ್ರಿಯ ಹಾಡುಗಳನ್ನು ಆಯ್ದಿದೆ.

   ಇದಲ್ಲದೆ ಮುದ್ರಣದಲ್ಲಿ ಸಿಗದ ಹಾಡುಗಳನ್ನು ಒದಗಿಸಿ ಉಪಕರಿಸಿದವರ ಹೆಸರುಗಳನ್ನು ಹಾಡುಗಳ ಜೊತೆಯೇ ಹೇಳಿದೆ. ಅವುಗಳ ಕವಿಗಳ ಹೆಸರು ಬಹುಪಾಲು ತಿಳಿದಿಲ್ಲ.

---

Laser typeset at Saravu Graphic Impressions and
printed at Shivam offset, New Delhi